# ಹವ್ಯಕ ಸಮಾಜ

ಮತ್ತು

# ಶ್ರೀ ಗುರುಮಠದ

# ಇತಿಹಾಸ.



ಪ್ರಕಾಶಕರು:-

ಶ್ರೀಮದ್ರಾಮಚಂದ್ರಾಪುರ ಮಠದ ಇತಿಹಾಸ
ಪ್ರಕಾಶನ ಸಮಿತಿ, ತೀರ್ಥಹಳ್ಳಿ.



ಸನ್ ೧೯೫೪.

ಬೆಲೆ:- ಒಂದು ರೂಪಾಯಿ.

ಹವ್ಯಕ ಸಮಾಜ

ಮತ್ತು

# ಶ್ರೀ ಗುರು ಮಠದ

ಇತಿಹಾಸ.





ಪ್ರಕಾಶಕರು,

ಶ್ರೀಮದ್ರಾಮಚಂದ್ರಾಪುರ ಮಠದ ಇತಿಹಾಸ ಪ್ರಕಾಶನ

ಸಮಿತಿ, ತೀರ್ಥಹಳ್ಳಿ.

ಲೇಖಕರು,

ವೈದ್ಯ. ಗ. ಸು. ಪಾಟೀಲ, ಬರಿಗೆ.

# ಪ್ರಕಾಶನ ಸಮಿತಿಯ ಸದಸ್ಯರು.



ಮ॥ ರಾ॥ ಶ್ರೀ॥ ಹೊಸಬಾಳೆ ಸುಬ್ಬರಾಯರು, (ಅಧ್ಯಕ್ಷ.)

,, ತುಂಬೆ ಸುಬ್ಬರಾವ್, ಸಾಗರ.

,, ಟಿ. ತಿಮ್ಮಪ್ಪ ಹೆಗಡೆ, ಕೆ॥ ಲಿಂಗದಹಳ್ಳಿ.
(ಸಾಗರ)

,, ಚಕ್ರಕೋಡಿ ಶಾಮಶಾಸ್ತ್ರಿ
ಬಿ. ಎ., ಬಿ. ಎಲ್. ವಕೀಲ್, ಪುತ್ತೂರು.

,, ಈಶ್ವರ ಕೇಶವ ಭಟ್ಟ,
ಬಿ. ಎ., ಎಲ್ ಎಲ್. ಬಿ. ಹೊನ್ನಾವರ.

,, ಗಣೇಶ ಗಣಪತಿ ಭಟ್ಟ, ಚಿತ್ರಿಗೆ.
(ಕುಮಟಾ)



## ॥ ಶ್ರೀಮದ್ರಾಮಚಂದ್ರಪುರ ಮಠೀಯ ಗುರು ಪರಂಪರಾ ಸ್ತೋತ್ರಂ ॥



ನಾರಾಯಣಂ ಪದ್ಮಭವಂ ವಸಿಷ್ಠಂ ಶಕ್ತಿಂಚ ತತ್ಪುತ್ರ ಪರಾಶರಂಚ ।
ವ್ಯಾಸಂ ಶುಕಂ ಗೌಡಪದಂ ಮಹಾಂತಂ ಗೋವಿಂದ ಯೋಗೀಂದ್ರ ಮಥಾಸ್ಯಶಿಷ್ಯಂ ॥೧॥
ಶ್ರೀ ಶಂಕರಾಚಾರ್ಯ ಮಥಾಸ್ಯಪದ್ಮ ಪಾದಂಚ ಹಸ್ತಾಮಲಕಂಚ ಶಿಷ್ಯಂ ।
ತಂತ್ರೋಟಕಂ ವಾರ್ತಿಕಕಾರಮನ್ಯಾನ್ ಅಸ್ಮದ್ಗುರೂನ್ ಸಂತತಮಾನತೋಸ್ಮಿ ॥೨॥
ನಮಾಮ್ಯಸ್ಮದ್ಗುರುಂ ನಿತ್ಯಂ ಗೋವಿಂದಂ ಭಗವದ್ಗುರುಂ ।
ಶಂಕರಾಚಾರ್ಯವರ್ಯಂಚ ಜಗದ್ವಿಖ್ಯಾತ ಸ್ವಾಮಿನಂ ॥೩॥
ತಸ್ಯ ಶಿಷ್ಯಂ ಸುರಶ್ರೇಷ್ಠಂ ವಿದ್ಯಾನಂದಂ ಜಗದ್ಗುರುಂ ।
ಚಿದ್ಬೋಧೇಂದ್ರಂಚ ಸದ್ರೂಪಂ ನಿತ್ಯಾನಂದಂ ಮಹಾಮುನಿಂ ॥೪॥
ನಿತ್ಯಬೋಧಘನೇಂದ್ರಾಯ ಜಗದ್ವಿಖ್ಯಾತ ಮೂರ್ತಯೇ ।
ಭಾರತೀ ಸಚ್ಚಿದಾನಂದ ತೀರ್ಥಾಯಗುರವೇನಮಃ ॥೫॥
ಚಿದ್ಘನೇಂದ್ರಾಯ ಗುರವೇ ಸೀತಾರಾಮೇಂದುಮೂರ್ತಯೇ ।
ಚಿದ್ಬೋಧಾಯ ಪ್ರಶಾಂತಾಯ ರಾಘವೇಶ್ವರ ಮೂರ್ತಯೇ ॥೬॥
ರಾಮಚಂದ್ರಾಯಗುರವೇ ರಾಘವೇಶ್ವರ ಮೂರ್ತಯೇ ।
ರಾಮಯೋಗೀಂದ್ರಗುರವೇ ನೃಸಿಂಹಾಯ ನಮೋನಮಃ ॥೭॥
ಅನಂತೇಂದ್ರಾಯಶಾಂತಾಯ ರಾಮಭದ್ರಾಯ ಯೋಗಿನೇ ।
ರಾಘವೇಶ್ವರ ದೇವಾಯ ಯತೀಂದ್ರಾಯ ನಮೋನಮಃ ॥೮॥
ವಿದ್ಯಾಘನೇಂದ್ರ ಗುರವೇ ರಘುನಾಥಾಯತೇನಮಃ ।
ರಾಮಚಂದ್ರಾಯಗುರವೇ ಸರ್ವ ವಿದ್ಯಾ ಸ್ವರೂಪಿಣೇ ॥೯॥
ರಘೂತ್ತಮಾಯ ದೇವಾಯ ಪರಮೇಶ್ವರ ಮೂರ್ತಯೇ ।
ರಾಘವೇಶ್ವರ ದೇವಾಯ ಭಾರತೀ ಪದಯೋಗಿನೇ ॥೧೦॥
ರಘೂತ್ತಮಾಯ ದೇವಾಯ ಭಾರತೀ ಪದಯೋಗಿನೇ ।
ಇಮ್ಮಡಿ ಪ್ರೌಢದೇವಾಯ ಶ್ರೀ ರಘೂತ್ತಮ ಮೂರ್ತಯೇ ॥೧೧॥
ರಾಘವೇಶ್ವರ ದೇವಾಯ ಗುರವೇ ತೇ ನಮೋನಮಃ ।
ಇಮ್ಮಡಿಪ್ರೌಢ ಗುರವೇ ರಾಘವೇಶ್ವರ ಮೂರ್ತಯೇ ॥೧೨॥
ತಸ್ಯ ಶಿಷ್ಯಾಯ ದೇವಾಯ ರಾಮಚಂದ್ರಾಯತೇನಮಃ ।
ತಸ್ಯ ಶಿಷ್ಯಾಯ ಗುರವೇ ರಾಘವೇಂದ್ರಾಯತೇನಮಃ ॥೧೩॥
ಸರ್ವಶಾಸ್ತ್ರಪ್ರಬೋಧಾಯ ರಾಘವೇಶ್ವರ ಮೂರ್ತಯೇ ।
ರಾಮಚಂದ್ರಾಯ ದೇವಾಯ ಗುರುವೇ ತೇ ನಮೋನಮಃ ॥೧೪॥

# ಅರ್ಪಣ ಪತ್ರ.

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರೇವ ಮಹೇಶ್ವರಃ ।
ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇನಮಃ ॥
ವಸುದೇವಸುತಂ ದೇವಂ ಕಂಸ ಚಾಣೂರ ಮರ್ದನಂ ।
ದೇವಕೀಪರಮಾನಂದಂ ಕೃಷ್ಣಂವಂದೇ ಜಗದ್ಗುರುಂ ॥

— ಶಿಷ್ಯಸ್ತೇಹಂಶಾಧಿಮಾಂತ್ವಾಂಪ್ರಪನ್ನಂ॥

ಶ್ರೀ ಮಜ್ಜಗದ್ಗುರು ಶಂಕರಾಚಾರ್ಯಪರಂಪರಾ ಪ್ರಾಪ್ತವಾದ
ಶ್ರೀಮದ್ರಾಮಚಂದ್ರಪುರಮಠದ ಧರ್ಮಪೀಠಾಧೀಶ
ಶ್ರೀಮದ್ರಾಮಚಂದ್ರಭಾರತೀ ಕರಕಮಲ ಸಂಜಾತರೂ, ವಿದ್ಯಾ, ವಿನಯ,
ಗಾಂಭೀರ್ಯೌದಾರ್ಯ, ತೇಜಸ್ವಿತಾ, ಸನಾತನಧರ್ಮಪ್ರೇಮ,
ವಿವೇಕ, ವೈರಾಗ್ಯಾದಿ ದಿವ್ಯಗುಣಗಳಿಂದ ಪರಿಪೂರ್ಣರೂ,
ನನ್ನ ಅಂತಃಕರಣವನ್ನರಳಿಸಿ, ತಮ್ಮ
ಕೃಪಾಸುಧೆಯನ್ನೆರಚಿದವರೂ, ನನ್ನ ಪರಮಪೂಜ್ಯ ಧರ್ಮಗುರುಗಳೂ
ಆದ, ಅನಂತಶ್ರೀವಿಭೂಷಿತ
**ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರ**
**ದಿವ್ಯ ಚರಣಾರವಿಂದಗಳಿಗೆ**
ಜಗದ್ಗುರು ಭಗವಾನ್ ಶ್ರೀ ಕೃಷ್ಣನ ಪಾದಕಮಲಗಳನ್ನು ಸ್ಮರಿಸಿ
**ಈ ಗ್ರಂಥವನ್ನು ಭಕ್ತಿಪೂರ್ವಕವಾಗಿ ಅರ್ಪಿಸಿ, ಶಿಷ್ಯನ**
ಶ್ರೇಯಸ್ಸಾಧಕವಾದ
ಆಶೀರ್ವಚನವನ್ನು ಕೈಜೋಡಿಸಿ ಬೇಡಿಕೊಳ್ಳುವೆನು.

**ವೈದ್ಯ, ಗ. ಸು. ಪಾಟೀಲ, ಬರಿಗೆ.**
ಗ್ರಂಥಕರ್ತಾ.

॥ ಓಂ ತತ್ಸತ್. ॥

ಯತ್ಪಾದಾಂಬುಜಸೇವನಾತ್ ಜನಿಮತಾಂ ಭವ್ಯಂದರೀ ದೃಶ್ಯತೇ ।
ಯತ್ಕಾರುಣ್ಯವಶಾಶ್ಚ ಮಾದೃತಜನೋ ಮುಗ್ಧೋಪಿ ಮುಕ್ತೋಭವೇತ್ ॥
ಶ್ರೀಮಚ್ಚಂಪಕಕಾನನಸ್ಥಿತಿಜುಷಾಂ ತೇಷಾಂ ಭವಾನಿಪತೇ ।
ರಂಶಾನಾಂ ಚರಣೌಭಜಾಮಿ ಸತತಂ ಭಕ್ತ್ಯಾ ಗುರೂಣಾಂಗುರೋಃ ॥

# ಶ್ರೀ ಮಹಾಶೀರ್ವಾದ ಪ್ರಸಾದಃ

## ಶಿಷ್ಯವರನಾದ- ಗ. ಸು. ಪಟೇಲ-ಬರಿಗೆ ಇವನಿಗೆ.

## ಶ್ರೀಮದ್ರಾಮಚಂದ್ರಾಪುರಮಠ ಮಹಾ ಸಂಸ್ಥಾನದಿಂದಾ.

॥ ಸಾಂಪ್ರತಂ ॥

ನೀನು ಭಕ್ತಿಯಿಂದ ಸಮರ್ಪಿಸಿದ ಈ ಇತಿಹಾಸ ಗ್ರಂಥವನ್ನು ನೋಡಿ ಬಹಳ ಸಂತೋಷವಾಯಿತು.

ಕೇವಲ ಮನುಷ್ಯ ಜನ್ಮವೇ ಪರಮಪುರುಷಾರ್ಥಕ್ಕೆ ಕಾರಣವೆಂಬುದು ಶ್ರುತಿ ಸಿದ್ಧವಾಗಿರುತ್ತದೆ. "ಯಥಾಕರ್ಮ ಯಥಾಶ್ರುತಂ" ಎಂಬ ವೇದವಾಕ್ಯದಂತೆ ಗುಣಕರ್ಮಾನುಸಾರವೇ ಜನ್ಮ, ಜಾತಿ, ನೀತಿ, ಧರ್ಮ ಮುಂತಾದ ಪ್ರಗತಿಗಳಿಗೆ ಕಾರಣವಾಗಿರುವುದು. ಮತ್ತು "ಮಹಾಜನೊಯೇನ ಗತಃ ಸಪಂಥಾಃ" ಎಂಬ ನ್ಯಾಯದಂತೆ ಮಹಾತ್ಮರ ಆಚರಣೆಯು ಸರ್ವಧರ್ಮಾದರ್ಶವೆಂಬುದು ಸಿದ್ಧವೇ ಸರಿ. ಹೀಗೆ ವೈದಿಕತತ್ವಾನುಗುಣ್ಯ- ಕಾವ್ಯೇತಿಹಾಸ ಕಾದಂಬರ್ಯಾದಿ ಗ್ರಂಥವನ್ನು ಬರೆಯುವದರಿಂದ ತದನುಸಾರ ಪ್ರವಚನ ಆಚರಣೆಯಿಂದಲೇ ದೇಶೀಶ ಸೇವೆ (ಜನತಾಸೇವೆ) ಯಾಗುತ್ತದೆ. ಇದೇ ಶ್ರೇಯಃಪ್ರೇಯಃಪ್ರಾಪ್ತಿಗೆ ಒಳ್ಳೇ ಸಾಧನವಾಗಿರುತ್ತದೆ. ಈ ತತ್ವವನ್ನನುಸರಿಸಿ, ನೀನು ಕೇವಲ ನಿಃಸ್ವಾರ್ಥಿಯಾಗಿ, ಶ್ರೀ ಗುರುಸೇವಾ ಮತ್ತು ಲೋಕಸೇವೆಗಾಗಿಯೇ ಈ ಗ್ರಂಥವನ್ನು ರಚಿಸಿರುತ್ತೀ ಎನ್ನುವುದರಲ್ಲಿ ಸಂದೇಹವಿಲ್ಲ. ಈ ಗ್ರಂಥವು ( ಪಂಡಿತರಿಗೂ ಪಾಮರರಿಗೂ ) ರಂಜಕವಾಗಿದ್ದು ಹವ್ಯಕ ಸಮಾಜಕ್ಕೆ ಕೈಗನ್ನಡಿಯಾಗಿದ್ದರೂ ಅಭೇದ ಮತಾನುಸಾರಿಗಳಾದ ಸಮಸ್ಥರಿಗೂ ಧರ್ಮಾಭಿಮಾನಮೂಲಕ ತುಂಬಾಅನುಕೂಲವಾಗುತ್ತದೆ.

ಈ ಗ್ರಂಥಾವಲೋಕನ ಮತ್ತು ಮನನದಿಂದ ಸಮಸ್ತ ಶಿಷ್ಯ ವೃಂದವೂ ಸ್ವಧರ್ಮ, ಸ್ವಕರ್ಮಾಚರಣೆಯಿಂದ ಸುಖವಾಗಿ ಬಾಳಲಿ; ಈಶ–ದೇಶ ಭಕ್ತನಾದ ನಿನಗೆ ಉತ್ತರೋತ್ತರ ಬುದ್ಧಿ ಮತ್ತು ಸಿದ್ಧಿ ಆಯುರ್ಬಲಾದಿ ಶಕ್ತಿಗಳು ಉಂಟಾಗಲೆಂದು,

**ಶ್ರೀ ಸೀತಾರಾಮಚಂದ್ರ ಶ್ರೀ ಚಂದ್ರಮೌಳೀಶ್ವರ ದೇವರಿಗೆ**
**ಸಂಪ್ರಾರ್ಥಿಸಿದ**

# ಶ್ರೀ ಮಹಾಶೀರ್ವಾದ ಪ್ರಸಾದಃ



**॥ ಜಯತ್ಯೋಂ ಓಂ ॥**

**ಶ್ರೀ ನಾರಾಯಣ ಸ್ಮೃತಯಃ**

ಸರ್ವೇಭವಂತು ಸುಖಿನಃ ಸರ್ವೇಸ್ಸಂತು ನಿರಾಮಯಾಃ ।
ಸರ್ವೇಭದ್ರಾಣಿ ಪಶ್ಯಂತು ಮಾಕಶ್ಚಿದ್ದುಃಖರ್ಮಾ ಭವೇತ್ ॥

---

ಶಾ॥ ಶಕೆ ೧೮೭೫ ನೇ
ವಿಜಯ ಸಂ॥ ರದ ಫಾಲ್ಗುಣ
ಶು॥ ೧೧, ಇಂದುವಾಸರೇ

ಶ್ರೀಮಜ್ಜಗದ್ಗುರು
ಶಂಕರಾಚಾರ್ಯ
ಶ್ರೀ ರಾಘವೇಂದ್ರಭಾರತೀಸ್ವಾಮಿ.





ಶ್ರೀಮಜ್ಜಗದ್ಗುರು ಆದಿ ಶಂಕರಾಚಾರ್ಯರು.

# ನಮ್ಮ ಮಾತು.

ಪ್ರತಿಯೊಬ್ಬನೂ ತನ್ನ ಮನೆತನ, ಜಾತಿಧರ್ಮ, ಗುರುಪರಂಪರೆ, ಹಾಗೂ ದೇಶದ ವಿಚಾರವನ್ನು ತಿಳಿದುಕೊಳ್ಳುವುದು ಮುಖ್ಯ ಕರ್ತವ್ಯವಾಗಿದೆ. ಈಪುಸ್ತಕ ದಲ್ಲಿ ಹವ್ಯಕಬ್ರಾಹ್ಮಣ ಜನಾಂಗ ಮತ್ತು ಆ ಜನಾಂಗದ ಗುರುಮಠಗಳ ಇತಿ ಹಾಸವನ್ನು ಬರೆದಿರುತ್ತೆ. ಮಯೂರವರ್ಮ ಮಹಾರಾಜನಿಂದ ಆಹ್ವಾನಿಸಲ್ಪಟ್ಟ ಈ ಹವ್ಯಕರ ಮುಖ್ಯ ಕರ್ತವ್ಯವು ಯಜ್ಞಯಾಗಾದಿಗಳೇ ಆಗಿತ್ತು. "ಅಗ್ನಿ ಮುಖಾವೈ ದೇವಾಃ" ಎಂಬಶೃತಿಯಂತೆ ಅಗ್ನಿಮುಖಾಂತರವಾಗಿ ದೇವತೆಗಳನ್ನು ಅರ್ಚಿಸುವ ಯಜ್ಞಯಾಗಾದಿಗಳಿಂದ ಮಳೆಯೂ, ಮಳೆಯಿಂದ ಅನ್ನವೂ ಉತ್ಪತ್ತಿ ಯಾಗಿ ಸರ್ವಭೂತಗಳ ಪೋಷಣೆಯೂ ದೇಶದ ಸಂಪತ್ಸಮೃದ್ಧಿಯೂ ಉಂಟಾಗುವುದು ಹೀಗೆ ಯಜ್ಞವು ಅತಿಮಹತ್ವದ ರಾಷ್ಟ್ರೀಯ ಕಾರ್ಯವಾಗಿದೆ. ಆದ್ದರಿಂದಲೇ ಹಿಂದಿನಿಂದಲೂ ಬ್ರಾಹ್ಮಣರಿಗೆ ರಾಜಾಶ್ರಯವಿತ್ತು. ರಾಜಾಶ್ರಯವಿದ್ದುದರಿಂ- ದಲೇ ಬ್ರಾಹ್ಮಣರು ದೇವ-ಋಷಿ-ಪಿತೃಗಳ ಆರಾಧನೆಯಲ್ಲೇ ತತ್ಪರರಾಗಿದ್ದು, ಲೋಕ ಹಿತದೃಷ್ಟಿಯಿಂದ "ಸರ್ವೇಜನಾಃ ಸುಖಿನೋಭವಂತು" ಎಂಬ ಉದಾರ ಭಾವನೆಯುಳ್ಳವರಾಗಿದ್ದರು. ಇಂಥ ಬ್ರಾಹ್ಮಣ ಶ್ರೇಷ್ಠರ ಸಹಾಯದಿಂದಲೇ ರಾಜನೂ ಧರ್ಮದಿಂದ ರಾಜ್ಯ ಪರಿಪಾಲನೆಯಲ್ಲಿ ಸಮರ್ಥನಾಗಿರುತ್ತಿದ್ದನು. ಈ ರೀತಿಯಾಗಿ ತಪೋನಿರತರಾದ ಬ್ರಾಹ್ಮಣರಿಂದಲೂ, ಧರ್ಮನಿರತನಾಗಿ ಪ್ರಜಾ ಪಾಲನೆಯೇ ಮುಖ್ಯ ಕರ್ತವ್ಯವಾಗುಳ್ಳ ರಾಜನಿಂದಲೂ, ಧನಸಂಪತ್ತಿನಿಂದ ರಾಷ್ಟ್ರ ಹಿತವನ್ನೇ ಕೋರುವ ವೈಶ್ಯರಿಂದಲೂ, ಸೇವಾತತ್ಪರರಾದ ಶೂದ್ರರಿಂದಲೂ ಕೂಡಿದ ಭರತಖಂಡವು ಜಗತ್ತಿಗೇ ಆದರ್ಶಮಾತ್ರವಲ್ಲ; ಪ್ರಾಣದಂತಿತ್ತು.

ಈಚೆಗೆ ರಾಜಾಶ್ರಯ ತಪ್ಪಿದ್ದರಿಂದಲೂ, ಕಲಿಪ್ರಭಾವದಿಂದಲೂ, ಬ್ರಾಹ್ಮಣರ ತಪಃಶಕ್ತಿಯು ಕುಗ್ಗಿತು. ಜಾತಿಕ್ಷತ್ರಿಯರವಂಶವೂ, ಅಶುದ್ಧ ವಾಯಿತು. ಜೀವನೋಪಾಯವೇ ದೊಡ್ಡದಾಯಿತು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ತಮ್ಮ ಅದ್ಭುತ ತಪೋಬಲದಿಂದ ಅನೇಕ ವಿಚಿತ್ರವಾದ ಅಸಾಧಾರಣ ಕಾರ್ಯಗಳನ್ನು ಮಾಡುತ್ತಿದ್ದರು. ರಾಷ್ಟ್ರಕ್ಕೆ ಬಂದಿರುವ ವಿಪತ್ತನ್ನು ದೈವೀ ಶಕ್ತಿಯ ಸಹಾಯದಿಂದ ದೂರಪಡಿಸಲು ಸಮರ್ಥರಾಗಿದ್ದರು. ನಮ್ಮ ಪ್ರಾಚೀನರ ಈ ಇತಿಹಾಸದಿಂದ ನಾವು ಅರಿತುಕೊಳ್ಳಬೇಕಾದ್ದೇನೆಂದರೆ ಅವರ ವಂಶಜರಾದ ನಾವು ಅವರಂತೇ ಪ್ರಭಾವಶಾಲಿಗಳಾಗಿ ಬಾಳುವುದು ಹಲವು ಕಾರಣಗಳಿಂದ ಈಗ ಅಸಾಧ್ಯವಾಗಿರಬಹುದು. ದೇಶೋದ್ಧಾರದಂಥ ಮಹಾಕಾರ್ಯವು ನಮ್ಮಿಂದಾಗ

ದಿರಬಹುದು. ಆದರೆ ನಮ್ಮ ಉದ್ಧಾರದ ಯೋಚನೆಯನ್ನಾದರೂ ನಾವು ಮಾಡಬೇಕಲ್ಲವೆ ? ಕೇವಲ ಹೊಟ್ಟೆ, ಬಟ್ಟೆ ಅಥವಾ ಇಂದ್ರಿಯ ತೃಪ್ತಿಯೊಂದೇ ಮನುಷ್ಯಕರ್ತವ್ಯದ ಪರಮಾವಧಿಯಲ್ಲ. ಒಂದಿಲ್ಲೊಂದು ದಿನ ನಾವು ಈ ದೇಹ ವನ್ನು ಬಿಟ್ಟು ಹೋಗುತ್ತೇವೆ. ಅಲ್ಲಿಂದ ಮುಂದಿನ ಗತಿಏನು ? ಎಂಬುದೇ ಬಹಳ ಮುಖ್ಯವಾದ ಪ್ರಶ್ನೆ.

ನಮ್ಮ ಜೀವಮಾನದಲ್ಲಿ ಇಹ-ಪರಗಳೆರಡನ್ನೂ ಸುಖಮಯವಾಗಿ ಸಾಧಿಸಿ ಕೊಂಡುಹೋಗಲು ಹಿಂದಿನ ಮಹರ್ಷಿಗಳು ಮಾರ್ಗವನ್ನು ಕಂಡುಹಿಡಿದಿದ್ದಾರೆ. ಅದಕ್ಕೇ ಧರ್ಮವೆಂದು ಹೆಸರು. " ಧರ್ಮೋ ರಕ್ಷತಿ ರಕ್ಷಿತಃ " ಅಂದರೆ ಧರ್ಮ ವನ್ನು ನಾವು ಪಾಲಿಸಿದರೆ, ಧರ್ಮವು ನಮ್ಮನ್ನು ರಕ್ಷಿಸುವುದು. ಧರ್ಮವು ವರ್ಣ ಧರ್ಮ, ಆಶ್ರಮ ಧರ್ಮ, ಸಾಮಾನ್ಯ ಧರ್ಮವೆಂಬ ಒಳವಿಭಾಗದಿಂದ ಕೂಡಿದೆ. ಇವುಗಳನ್ನು ತಪ್ಪದೇ ಪರಂಪರಾಗತವಾಗಿ ರಕ್ಷಿಸಿಕೊಂಡು ಹೋಗಲು ಶಂಕರಾಚಾರ್ಯರೇ ಮೊದಲಾದ ಮಹಾಪುರುಷರು ಧರ್ಮ ನಿಯಂತ್ರಣಕ್ಕಾಗಿ ಗುರುಮಠಗಳನ್ನು ಸ್ಥಾಪಿಸಿರುವರು. ಧರ್ಮ ಮಾರ್ಗವು ಅತ್ಯಂತ ಗಹನವಾದದ್ದು. ಅತಿ ಸೂಕ್ಷ್ಮವಾದ ಧರ್ಮದ ಆಚರಣೆಯಲ್ಲಿ ಸಂಶಯ ತೋರಿದಾಗಲೆಲ್ಲಾ ಶಾಸ್ತ್ರ ವಚನ ಮತ್ತು ಗುರುಗಳ ಆಜ್ಞೆಯೇ ಪರಮ ಪ್ರಮಾಣವಾಗಿದೆ. ಆದ್ದರಿಂದ ಧರ್ಮ ಗುರುಪೀಠವು ನಮಗೆ ಪರಮ ಪೂಜ್ಯವಾದುದ್ದೆಂಬುದರಲ್ಲೇನೂ ಸಂದೇಹವಿಲ್ಲ ಅಂಥ ಧರ್ಮ ಗುರುಪರಂಪರೆಯ ಮಹತ್ವವನ್ನು ತಿಳಿದು ಶ್ರದ್ಧಾ ಭಕ್ತಿಯುತರಾಗಿ ಆಚಾರ ನಿರತರಾದಲ್ಲಿ ಅದರಿಂದ ಶ್ರೇಯಸ್ಸುಂಟಾಗುವುದು.

ಹೀಗೆ ಪ್ರತಿಯೊಂದು ಸಮಾಜವೂ ತನ್ನತನ್ನ ಕರ್ತವ್ಯಕರ್ಮ ಮತ್ತು ಧರ್ಮ ದಲ್ಲಿ ತತ್ಪರವಾಗಿದ್ದರೆ ದೇಶೋದ್ಧಾರವು ತಾನಾಗಿಯೇ ಆಗುವುದು; ಆತ್ಮೋದ್ಧಾರ ವಂತೂ ಆಗೇಆಗುವುದು. ನಮ್ಮ ಜನಾಂಗ ಮತ್ತು ನಮ್ಮ ಮಠದ ಇತಿಹಾಸವನ್ನು ಬರೆಸುವ ಆಲೋಚನೆ ಬಹಳ ವರ್ಷಗಳಿಂದ ಇತ್ತು. ಈ ಬಗ್ಗೆ ಕೆಲವು ಸಂಗ್ರಹ ಗಳನ್ನು ಒಬ್ಬೊಬ್ಬರಿಗೆ ಕೊಡಲಾಗಿತ್ತು. ಅದು ಪೂರ್ಣವಾಗದೇ ಹಾಗೇ ಕುಳಿತಿತು. ನಂತರ ಕಳೆದ ನಂದನ ಸಂವತ್ಸರದಲ್ಲಿ ಶ್ರೀ|| ವೈದ್ಯ, ಗಣಪತಿ ಸುಬ್ರಹ್ಮಣ್ಯ ಪಾಟೀಲ್ ಬರಿಗೆ, ಇವರೊಡನೆ ಆಲೋಚಿಸಿದ್ದರಲ್ಲಿ ಅವರು ಒಪ್ಪಿಕೊಂಡು ಶ್ರೀಮಠಕ್ಕೆ ಬಂದು, ಅಲ್ಲಿಯ ರಿಕಾರ್ಡುಗಳ ಪರಿಶೋಧನೆಯಿಂದಲೂ, ತಮ್ಮ ಬುದ್ಧಿ ಕೌಶಲ್ಯದಿಂದಲೂ, ಪರಿಶ್ರಮಪಟ್ಟು ಈ ಇತಿಹಾಸವನ್ನು ಬಹು ಸ್ವಾರಸ್ಯ ವಾಗಿಯೂ, ಸುಂದರವಾಗಿಯೂ, ಅತಿಶೀಘ್ರದಲ್ಲಿ ತಯಾರಿಸಿ ಕೊಟ್ಟರು. ಇದಕ್ಕಾಗಿ ಪ್ರಕಾಶನಸಮಿತಿಯು ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸುತ್ತದೆ.

ಇದರ ಮುದ್ರಣವನ್ನು ಕಡಿಮೆ ವೆಚ್ಚದಿಂದಲೂ, ಬಹುಸುಂದರವಾಗಿಯೂ, ಅತ್ಯಲ್ಪಕಾಲದಲ್ಲೇ ಬಹಳ ಮುತುವರ್ಜಿಯಿಂದ ಮಾಡಿಕೊಟ್ಟ ಸೊರಬದ ಶ್ರೀ ರಂಗನಾಥ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ|| ರಾಮರಾವ್ ಗೋಡಬೋಲೆ, ಶ್ರೀಪಾದರಾವ್ ಗೋಡಬೋಲೆ ಇವರಿಗೆ ಅನಂತ ಧನ್ಯವಾದಗಳು.

ಇನ್ನು ಈ ಇತಿಹಾಸದ ಮಹತ್ವವನ್ನು ಪ್ರತಿಯೊಬ್ಬ ಹವ್ಯಕ ಬಂಧುವೂ ಅರಿತು ತಮ್ಮ ಶ್ರೇಯಃಸ್ಸಾಧನೆಯಮೂಲಕ ನಮ್ಮ ಪರಿಶ್ರಮವನ್ನು ಸಾರ್ಥಕಗೊಳಿಸಿ ಶ್ರೀ ಗುರುಕೃಪಾಪಾತ್ರರಾಗಬೇಕೆಂದು ಬೇಡಿಕೊಳ್ಳುವೆವು.

ತಾರೀಖು
20-3-1954.

**ಹೊಸಬಾಳೆ ಸುಬ್ಬರಾವ್, ಸೊರಬ.**
**ಪ್ರಕಾಶನ ಸಮಿತಿಯ ಪರವಾಗಿ.**



## ಶ್ರೀಮದ್ರಾಮಚಂದ್ರಪುರ ಮಠದ ಗುರುಪರಂಪರಾ ವಂಶವೃಕ್ಷ.

೧ ಶ್ರೀಮಚ್ಛಂಕರಾಚಾರ್ಯಃ

೨ ಶ್ರೀಮತ್ಸುರೇಶ್ವರಾಚಾರ್ಯಃ

### ಶ್ರೀ ಗೋಕರ್ಣ ರಘೂತ್ತಮಪೀಠಂ

೩ ವಿದ್ಯಾನಂದಾಚಾರ್ಯಃ
೪ ಚಿದ್ಬೋಧಭಾರತೀ
೫ ನಿತ್ಯಾನಂದಭಾರತೀ
೬ ನಿತ್ಯಬೋಧಘನೇಂದ್ರಭಾರತೀ
೭ ಸಚ್ಚಿದಾನಂದಭಾರತೀ
೮ ಚಿದ್ಘನೇಂದ್ರಭಾರತೀ (ರಘುವೀರೇಂದ್ರಭಾರತೀ)
೯ ಸೀತಾರಾಮಚಂದ್ರಭಾರತೀ
೧೦ ಚಿದ್ಬೋಧಭಾರತೀ (ಕ್ರಿ. ಶ. ೧೩೯೦)
೧೧ ರಾಘವೇಶ್ವರಭಾರತೀ (ಕ್ರಿ. ಶ. ೧೪೬೪)

### ಶೃಂಗೇರಿ ಶಾರದಾಪೀಠಂ

ನಿತ್ಯಬೋಧಘನಾಚಾರ್ಯಃ

### ಕೆಕ್ಕಾರು ರಘೂತ್ತಮಮಠ

೧ ರಘೂತ್ತಮಭಾರತೀ
೨ ವಿಶ್ವರೂಪಭಾರತೀ
೩ ಸತ್ಯರೂಪಭಾರತೀ

### ಶ್ರೀಮದ್ರಾಮಚಂದ್ರಪುರಮಠ

೧೨ ರಾಮಚಂದ್ರಭಾರತೀ (ಕ್ರಿ. ಶ. ೧೫೦೦)
೧೩ ಅಭಿನವ ರಾಘವೇಶ್ವರಭಾರತೀ
೧೪ ರಾಮಯೋಗೀಂದ್ರಭಾರತೀ

೪ ಸರ್ವೇಶ್ವರಭಾರತೀ
೫ ರಘುನಾಥಭಾರತೀ
೬ ನೃಸಿಂಹ ಭಾರತೀ
೭ ರಾಮಚಂದ್ರಭಾರತೀ
೮ ರಘೂತ್ತಮಭಾರತೀ
೯ ರಾಘವೇಶ್ವರಭಾರತೀ
೧೦ ರಘುನಾಥಭಾರತೀ
೧೧ ರಘೂತ್ತಮಭಾರತೀ
೧೨ ರಾಮಚಂದ್ರಭಾರತೀ
* ೧೩ ರಾಘವೇಶ್ವರಭಾರತೀ (ಹಿರೆವಡೆಯರು)

೧೫ ನೃಸಿಂಹಭಾರತೀ
೧೬ ಅನಂತೇಂದ್ರಭಾರತೀ
೧೭ ರಾಮಭದ್ರಭಾರತೀ
೧೮ ರಾಘವೇಶ್ವರಭಾರತೀ
೧೯ ವಿದ್ಯಾಧನೇಂದ್ರಭಾರತೀ
೨೦ ರಘುನಾಥಭಾರತೀ
೨೧ ರಾಮಚಂದ್ರಭಾರತೀ
೨೨ ರಘೂತ್ತಮಭಾರತೀ
೨೩ ಪರಮೇಶ್ವರಭಾರತೀ
೨೪ ರಾಘವೇಶ್ವರಭಾರತೀ
೨೫ ರಘೂತ್ತಮಭಾರತೀ
೨೬ ರಾಘವೇಶ್ವರಭಾರತೀ
೨೭ ರಘೂತ್ತಮಭಾರತೀ
೨೮ ರಾಘವೇಶ್ವರಭಾರತೀ
೨೯ ರಘೂತ್ತಮಭಾರತೀ
೩೦ ರಾಘವೇಶ್ವರಭಾರತೀ
* ೩೧ ರಾಮಚಂದ್ರಭಾರತೀ
೩೨ ರಾಘವೇಂದ್ರಭಾರತೀ
೩೩ ರಾಘವೇಶ್ವರಭಾರತೀ
೩೪ ರಾಮಚಂದ್ರಭಾರತೀ
೩೫ ರಾಘವೇಂದ್ರಭಾರತೀ (ಕ್ರಿ. ಶ. ೧೯೫೩)





## ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀ ರಾಮಚಂದ್ರಾಪುರ

## " ಶ್ರೀ ಗುರ್ವಷ್ಟಕಂ "

(ವಸಂತತಿಲಕಾವೃತ್ತಂ)

ಶ್ಲೋಕ.
ಶ್ರೀ ಕಾರಕ ಪ್ರಣವ ಚೈತ್ರಪಿಕಂ ಮಹಾಂತಂ ।
ಭೂತಾದಿನಾಥ ದಯಿತಾಸು ಹಿತಾರ್ಥವಂತಂ ॥
ಶ್ರೀರಾಮಚಂದ್ರಪುರಭದ್ರ ಮಠಾಧಿವಾಸಂ ।
ಶ್ರೀರಾಘವೇಶ್ವರ ಗುರುಂ ಸತತಂ ಭಜಾಮಿ ॥ ೧ ॥

ತಾತ್ಪರ್ಯಂ ಸಂಪದ್ವಾಚಕ ಶ್ರೀಮಂತ್ರಪ್ರಧಾನವಾದ ಓಂಕಾರವೆಂಬ ವಸಂತ ಕಾಲ ಕೋಕಿಲನಾದ (ಪ್ರಣವಾತ್ಮಕವಾದ) ಮತ್ತು ಮಹಾತ್ಮನಾದ ಶ್ರೀ ಶಿವಸುಂದರಿ ರಾಜರಾಜೇಶ್ವರಿಯ ದಯಾಪಾತ್ರನಾದ ಶ್ರೀರಾಮ ಚಂದ್ರಾಪುರಮಠ ನಿವಾಸಿಯಾದ ೩೩ನೇ ಶ್ರೀರಾಘವೇಶ್ವರ ಭಾರತೀ ಗುರುವನ್ನು ಯಾವಾಗಲೂ ಸೇವಿಸುತ್ತೇನೆ.

---

ಶ್ಲೋಕ.
ಶ್ರೀರಾಮಚಂದ್ರ ಮಹದರ್ಚನ ಚಿತ್ತಚಂದ್ರಂ ।
ಶ್ರೀರಾಮಚಂದ್ರ ಕರುಣಾರ್ಣವ ಯೋಗಚಂದ್ರಂ ॥
ಶ್ರೀರಾಮಚಂದ್ರ ಪುರಭದ್ರ ಮಠಾಭ್ರ ಚಂದ್ರಂ ।
ಶ್ರೀರಾಮಚಂದ್ರ ಗುರುಪುಂಗವಮಾಶ್ರಯಾಮಿ ॥ ೨ ॥

ತಾತ್ಪರ್ಯಂ ಶ್ರೀರಾಮಪಂಚಾಯತನ ಮಹಾಪೂಜಕನಾದ ಮತ್ತು ಶ್ರೀರಾಮ ಕರುಣಾಸಮುದ್ರಕ್ಕೆ ಚಂದ್ರಪ್ರಾಯನಾದ (ಶ್ರೀರಾಮಾನುಗ್ರಹವುಳ್ಳವನಾದ) ಶ್ರೀರಾಮಚಂದ್ರಾಪುರ ಮಠಾಕಾಶಕ್ಕೆ ಚಂದ್ರಪ್ರಾಯನಾದ ೩೪ ನೇ ಶ್ರೀರಾಮಚಂದ್ರಭಾರತೀ ಗುರುವರ್ಯನನ್ನು ಆಶ್ರಯಿಸುತ್ತೇನೆ.

---

## ॥ ಶ್ರೀ ಗುರ್ವಷ್ಟಕಂ ॥

ವರ್ಣಾಶ್ರಮೋಚಿತ ಮಹಾಕರ ಪಾತ್ರದಂಡಂ |
ವರ್ಣಪ್ರಮಾವಿಹಿತ ಮಂತ್ರ ಪರಾರ್ಥದಂಡಂ ||
ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ |
ಶ್ರೀರಾಮಚಂದ್ರ ಗುರುಪುಂಗವಮಾಶ್ರಯಾಮಿ || ೫ ||

ನಾರಾಯಣ ಸ್ಮರಣಪೂರ್ವಕ ವಾಕ್ಪ್ರಸಾದಂ |
ಪಾರಾಯಣ ಪ್ರಣತಲೋಕ ಜನಾರ್ಥವಾದಂ ||
ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ |
ಶ್ರೀರಾಘವೇಂದ್ರ ಗುರುಪುಂಗವಮಾಶ್ರಯಾಮಿ || ೬ ||

ಶ್ರೀಧರ್ಮಕರ್ಮ ಮಹದಾಸನ ದೇಶಿಕೇಂದ್ರಂ |
ಶ್ರೀಧರ್ಮರೂಪಮನುಯೋಗಿ ಜನೋತ್ತರೇಂದ್ರಂ ||
ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ |
ಶ್ರೀಸದ್ಗುರುಂ ಜಗದನಂತ ಹಿತೇಂದ್ರಮೀಡೆ || ೭ ||

ಶ್ರೀರಾಮಚಂದ್ರ ಪರಿಸಕ್ತ ಹೃದಂಮಹಾಂತಂ |
ಸ್ವಧ್ಯಾನನಿಷ್ಠ ಮನವದ್ಯಗುಣಾಭಿರಾಮಂ ||
ಶ್ರೀರಾಮಚಂದ್ರ ಪುರಭದ್ರ ಮಠಾಧಿವಾಸಂ |
ಶ್ರೀಸದ್ಗುರುಂ ಜಗದನಂತ ಹಿತೇಂದ್ರಮೀಡೆ || ೮ ||

ಇದಂಗುರ್ವಷ್ಟಕಂಪುಣ್ಯಂ ದುಸ್ಸಹಾರ್ತಿವಿನಾಶಕಂ |
ಯಃಪಠೇತ್ ಶೃಣುಯಾತ್ ಭಕ್ತ್ಯಾ ಸಲಭೇತ್ ಸರ್ವಸಂಪದಃ ||







ವಸುದೇವ ಸುತಂ ದೇವಂ । ಕಂಸ ಚಾಣೂರ ಮರ್ದನಂ ॥<br>
ದೇವಕೀ ಪರಮಾನಂದಂ । ಕೃಷ್ಣಂ ವಂದೇ ಜಗದ್ಗುರುಂ ॥

# ಪೀಠಿಕೆ.

ಯಾವುದೊಂದು ಜನಾಂಗ ಅಥವಾ ದೇಶದ ಗತಇತಿಹಾಸ ಹಾಗೂ, ಮಹಾತ್ಮ್ಯೆಯನ್ನು ಅರಿತುಕೊಳ್ಳುವವರಿಗೆ ಆಯಾ ಜನಾಂಗ ಅಥವಾ ದೇಶದ ಬಗ್ಗೆ ಆತ್ಮ ವಿಶ್ವಾಸ ಉಂಟಾಗಲಾರದು; ತಮ್ಮ ಪೂರ್ವಜರ ಉಜ್ವಲ ಚರಿತ್ರ ಸ್ಮರಣೆಯಿಂದುಂಟಾಗುವ ಸ್ಫೂರ್ತಿ ದೊರಕದು. ಆತ್ಮ ನಿರೀಕ್ಷಣೆಗೆ, ಆತ್ಮಚರಿತ್ರೆಯೇ ಮೂಲ. ಭೂತಕಾಲದ ಘಟನೆಗಳ ಯಥಾ ಚಿತ್ರನನ್ನು ಸ್ಥಾಪಿಸುವ ಪ್ರವೃತ್ತಿಯು ಮನುಷ್ಯನಷ್ಟೇ ಹಳೆಯದು. ಇದರಿಂದ ಮನುಷ್ಯನಿಗೆ ಎರಡು ತರದ ಪ್ರಯೋಜನವಿದೆ. ೧. ಗತ ಇತಿಹಾಸದ ಉಜ್ವಲ ಭಾಗವು ವರ್ತಮಾನ ಜನಾಂಗಕ್ಕೆ ಸ್ಫೂರ್ತಿದಾಯಕವಾಗಿದ್ದು, ಉನ್ನತಿಗೆ ಸಹಾಯಕವಾಗುವುದು. ೨. ಅದರ ನೀಚಾಂಶದ ದುಷ್ಪರಿಣಾಮವು ಮನುಷ್ಯನ ನೈತಿಕತೆಯನ್ನು ರಕ್ಷಿಸಿಕೊಳ್ಳಲು ನೆರವಾಗಬಹುದು. ಇವೆರಡೂ ಮುಖ್ಯ ಪ್ರಯೋಜನವಲ್ಲದೆ, ಇನ್ನೊಂದು ಗೌಣ ಪ್ರಯೋಜನವೂ ಇದೆ. ಗತ ಘಟನೆಗಳನ್ನು ಸ್ಮೃತಿಪಟಲದಲ್ಲಿ ತಂದು; ಮೆಲಕುಹಾಕುವುದರಲ್ಲಿ ಮನುಷ್ಯನು ಒಂದು ಅಪೂರ್ವ ಆನಂದದ ಅನುಭವವನ್ನು ಪಡೆಯುತ್ತಾನೆ. ಈ ಎಲ್ಲ ಕಾರಣಗಳಿಂದಲೇ ಪ್ರಾಚೀನಕಾಲದಿಂದಲೂ, ಇತಿಹಾಸವನ್ನು ಬರೆದಿಡುವ ಸಂಪ್ರದಾಯವಿದೆ. ಇಂಥ ಇತಿಹಾಸಗಳು ಖಂಡರೂಪದಿಂದ ಅಥವಾ ಪೂರ್ಣರೂಪೇಣ; ವೇದದಲ್ಲಿ, ಉಪನಿಷತ್ತಿನಲ್ಲಿ, ಪುರಾಣಾದಿಗಳಲ್ಲಿ ವರ್ಣಿಸಲ್ಪಟ್ಟಿವೆ. ರಾಮಾಯಣ, ಮಹಾಭಾರತಗಳೂ ಇಂಥವೇ ಇತಿಹಾಸಗಳು.

ಇತಿಹಾಸವು ದೇಶ, ಜನಾಂಗ, ವಂಶ, ವ್ಯಕ್ತಿ, ಸಂಪ್ರದಾಯಗಳದ್ದಾಗಿರಬಹುದು. ಒಬ್ಬ ವ್ಯಕ್ತಿಗೆ ತನ್ನ ಜೀವನದ ಇತಿಹಾಸವಿರುವಂತೆಯೇ ಪ್ರತಿ

ಯೊಂದು ವಂಶ, ಜನಾಂಗ, ದೇಶಗಳಿಗೂ ತನ್ನದೇ ಆದ ಒಂದು ಸ್ವತಂತ್ರ ಇತಿಹಾಸವಿರುತ್ತದೆ. ಆದರೆ ಯಾವುದು ವಿಶೇಷ ಉಜ್ವಲವಾಗಿರುವುದೋ ಅದು ಮಾತ್ರ ಉಲ್ಲೇಖನೀಯವಾಗಿದ್ದು ಉಳಿದ ಘಟನೆಗಳು ಅನಂತ ಮಹಾಕಾಲದಲ್ಲಿ ವಿಲೀನವಾಗುವುವು.

ಪ್ರಕೃತ ಇತಿಹಾಸವು ಒಂದು ಸಣ್ಣ ಬ್ರಾಹ್ಮಣ ಜನಾಂಗ ಮತ್ತು ಆ ಜನಾಂಗಕ್ಕೆ ಸಂಬಂಧಪಟ್ಟ ಧರ್ಮಗುರು ಪೀಠಗಳದ್ದಾಗಿದೆ. ಸಾಧಾರಣವಾಗಿ “ ಹಿಂದೂಸ್ಥಾನದಲ್ಲಿ ಬ್ರಾಹ್ಮಣ ಜನಾಂಗದ ಇತಿಹಾಸವೆಂದರೆ ಸನಾತನ ವೈದಿಕ ಧರ್ಮದ ಇತಿಹಾಸವೇ ಸರಿ. ” ಸಾಧಾರಣವಾಗಿ ಇತಿಹಾಸವೆಂದರೆ ರಾಜನೀತಿಗೆ ಸಂಬಂಧಿತ ( Politics ) ವೆಂಬ ಭ್ರಾಂತಭಾವನೆಯಿದೆ. ಇದು ಪಾಶ್ಚಾತ್ಯ ಶೈಲಿಯ ದ್ಯೋತಕ. ಆದರೆ ಭರತಖಂಡದ ಇತಿಹಾಸವು ರಾಜನೈತಿಕ ಪ್ರಾಮುಖ್ಯತೆಯಿಂದ ಕೂಡಿಲ್ಲ. ಭೇದದಲ್ಲಿ ಅಭೇದಭಾವನೆಯನ್ನು ಸ್ಥಾಪಿಸಿ, ನಾನಾ ಪಂಥಗಳನ್ನು ಒಂದೇ ಲಕ್ಷ್ಯದೆಡೆಗೆ ಒಯ್ಯುವುದೇ ಆಗಿದೆ. ಈ ದೃಷ್ಟಿಯಿಂದಲೇ ಪ್ರಕೃತ ಇತಿಹಾಸದ ಅವಲೋಕನ ಮಾಡಬೇಕೆಂದು ನನ್ನ ವಿನಂತಿ.

ವರ್ಣಧರ್ಮ, ಆಶ್ರಮ ಧರ್ಮಗಳನ್ನು ಮಾನ್ಯ ಮಾಡುವ ಸನಾತನ ವೈದಿಕ ಧರ್ಮವೇ ಜಗತ್ತಿನಲ್ಲಿ ಅತ್ಯುಚ್ಚ ಹಾಗೂ, ಅನಾದಿ ಧರ್ಮವೆಂದು ಕಂಡುಬರುತ್ತದೆ. ಇದು ಸೃಷ್ಟಿಯಲ್ಲಿರುವ ಸ್ವಾಭಾವಿಕ ಪಾರ್ಥಕ್ಯವನ್ನು ಯಥಾವತ್ತಾಗಿ ಸ್ಥಾಪಿಸಿ, ಐಕ್ಯತೆಯನ್ನು ಸಾಧಿಸುವ ಮಹಾಪ್ರಯತ್ನದಲ್ಲಿ ಸಫಲತೆಯನ್ನು ಪಡೆದು, ತನ್ನ ವೈಶಿಷ್ಟ್ಯವನ್ನು ಎತ್ತಿ ತೋರಿಸಿದೆ. ೧. ಅಂಥ ಸ್ಥೂಲ ಐಕ್ಯತೆಯನ್ನು ಹೊಂದಲು ಬಾಹ್ಯದ ನಾನಾತ್ವವನ್ನೆಲ್ಲಾ ನಾಶಪಡಿಸಬೇಕಾಗಿಲ್ಲ. ೨. ಎಲ್ಲರೂ ತನ್ನ ಎಲೆಯಲ್ಲಿ ಉಂಡರೆ ಮಾತ್ರ ಹೊಟ್ಟೆ ತುಂಬುವುದೆಂಬ ನಿಯಮವಿಲ್ಲ. ಆದ್ದರಿಂದ ಧರ್ಮಾಂತರವು ಮಹಾಪಾಪ. ೩. ಧರ್ಮವು ಕಾಯಿಕ, ವಾಚಿಕ, ಮಾನಸಿಕ, ಪ್ರಾದೇಶಿಕ, ವಿಶ್ವ, ಈ ಮುಂತಾದ ಭೇದಗಳಿಂದ ಕೂಡಿದ್ದರೂ, ಅದರ ‘ಪರಮ’ ಹಾಗೂ ‘ಚರಮ’ ಉನ್ನತಿಯು ಪರಮಾತ್ಮ ಪ್ರಾಪ್ತಿಯೇಸರಿ. ಇವೇ ಸನಾತನ ವೈದಿಕ ಧರ್ಮದ ಮೂಲತತ್ವಗಳು. “ ೧. ಅಸ್ಪೃಶ್ಯತೆ ( ಶುಚಿತ್ವ ) ೨. ಜನ್ಮನಾವರ್ಣವ್ಯವಸ್ಥೆ ( ಸಹಜ ಸಾಮಾಜಿಕ ವಿಕಾಸ ) ೩. ಆಶ್ರಮ ವ್ಯವಸ್ಥೆ ( ವೈಯುಕ್ತಿಕ ವಿಕಾಸ ) ಇವುಗಳೇ ಸನಾತನ ಧರ್ಮದ ಬಹಿರಂಗ ರೂಪಗಳು. ” ಇವಕ್ಕೆ ಶೃತಿ ಸ್ಮೃತಿಗಳೇ ಆಧಾರಗಳು. ಪರಮಾತ್ಮನ ನಿಶ್ವಾಸ ರೂಪವಾದುದೇ ಈ ಶೃತಿ ಸ್ಮೃತಿ ಮಂತ್ರಗಳು. ಈ ಮಂತ್ರಗಳ ಯಥಾರ್ಥ ತತ್ವಸಾಕ್ಷಾತ್ಕಾರಪಡೆದ ಮಹರ್ಷಿಗಳೇ ಈಧರ್ಮದ ಪ್ರವರ್ತಕರು.

ಜಗಚ್ಚಕ್ಷುವಾದ ಭಗವಾನ್ ಸೂರ್ಯನಾರಾಯಣನಿಗೂ ಉದಯಾಸ್ತಗಳಿರುವಂತೆ ಈ ಸರ್ವತೋ ಭದ್ರವಾದ ವೈದಿಕ ಸನಾತನ ಧರ್ಮಕ್ಕೂ ಅವನತಿ ಕಾಲವಿದೆ. ಇದರ ಅವನತಿಯ ಕಾಲವು ಜಿನಾಚಾರ್ಯ, ಮಹಾವೀರ ಮತ್ತು ಗೌತಮಬುದ್ಧ ಇವರ ಕಾಲದಿಂದಲೇ ಪ್ರಾರಂಭವಾಯಿತು ಎನ್ನಬಹುದು.

ಭರತಖಂಡದಲ್ಲಿ ಉದ್ಭವಿಸಿದ ಮೊದಲನೇ ಅವೈದಿಕ ಸಂಪ್ರದಾಯವೆಂದರೆ ಜೈನ, ಬೌದ್ಧ, ಚಾರ್ವಾಕ ಮತಗಳು. ಇವುಗಳಲ್ಲಿ ಚಾರ್ವಾಕ ಮತವು ಶುದ್ಧ ಲೌಕಿಕ ಹಾಗೂ, ಜಡವಾದವಾಗಿದ್ದು, ಯಾವ ಮೌಲಿಕ ಸಿದ್ಧಾಂತವು ಇಲ್ಲದ್ದರಿಂದಲೂ, ಜನಸಾಮಾನ್ಯರ ನಿತ್ಯವ್ಯವಹಾರಕ್ಕಿಂತ ವಿಶೇಷ ಸಾಧನೆಗಳೇನೂ ಇಲ್ಲದ್ದರಿಂದಲೂ, ವಿಶೇಷ ಪ್ರಚಾರಕ್ಕೆ ಬರಲಿಲ್ಲ. ಉಳಿದೆರಡೂ ಸುಮಾರು ಕ್ರಿ. ಪೂ. ೬ ನೇ ಶತಮಾನದಲ್ಲಿ ಹುಟ್ಟಿ, ಯುಗ ಪ್ರಭಾವದಿಂದ ರಾಜಾಶ್ರಯ ಪಡೆದು ತನ್ನದೇ ಆದ ಪ್ರತ್ಯೇಕ ಮತವನ್ನು ಸ್ಥಾಪಿಸಿಕೊಂಡವು. ಇವು ವೈದಿಕ ಧರ್ಮದ ತತ್ವಗಳಿಂದಲೇ ಹುಟ್ಟಿಕೊಂಡರೂ, ಶಬ್ದಪ್ರಮಾಣವನ್ನೊಪ್ಪದೆ, ವೈದಿಕ ಕರ್ಮಕಾಂಡವನ್ನೂ ಅಲ್ಲಗಳೆದು ಅವೈದಿಕ ಸಂಪ್ರದಾಯಗಳಾದವು. ಶಕಾರಂಭದ ಹೊತ್ತಿಗೆ ಇವು ಒಳ್ಳೇ ಉಚ್ಛ್ರಾಯಸ್ಥಿತಿಯನ್ನು ಪಡೆದು ಕ್ರಿ. ಶಕ ೬ ನೇ ಶತಮಾನದಲ್ಲಿ ಅವನತಿಗಿಳಿಯಿತು.

ಮಹಾಭಾರತ ಯುದ್ಧದಿಂದೀಚೆಗಿನ ಹಿಂದೂಗಳ ಧಾರ್ಮಿಕ ಇತಿಹಾಸದ ಪ್ರಾಮುಖ್ಯ ವ್ಯಕ್ತಿಗಳಲ್ಲಿ ಶಂಕರಾಚಾರ್ಯರು ಅಸಾಧಾರಣರು. " ಕೇವಲ ಮೂವತ್ತೆರಡೇ ವರ್ಷಗಳಲ್ಲಿ ಅಂತರ್ಧಾನರಾದ ಈ ಮಹಾಮಹಿಮರು ಮಾಡಿರುವ ಅಗಾಧವಾದ ಅನಂತಕಾರ್ಯಗಳಲ್ಲಿ ಮಠಸ್ಥಾಪನೆಯೂ ಒಂದು " ಬ್ರಾಹ್ಮಣ ಮತದ ಪುನರುದ್ಧಾರವು ಆಸೇತು ಹಿಮಾಚಲ ಪರ್ಯಂತವೂ ಆಗಿ, ವೇದಮತದ ಸನಾತನತ್ವವು ಸ್ಥಿರಪಟ್ಟಿತು. ಎಲ್ಲ ಸ್ಮಾರ್ತ ಮಠಾಧಿಪತಿಗಳೂ ತಮ್ಮ ತಮ್ಮ ಮಠದ ಮೂಲಸ್ಥಾಪಕರು ಶಂಕರಾಚಾರ್ಯರೇ ಸರಿಯೆನ್ನುತ್ತಾರೆ. ಆದರೆ ಈ ಮಹಾಪುರುಷರ ನಿಶ್ಚಿತವಾದ ಕಾಲನಿರ್ಣಯವು ವಿದ್ವಾಂಸರಲ್ಲೇ ಅಜಗಜಾಂತರವುಳ್ಳದ್ದಾಗಿದೆ. ಅಂದರೆ ಇಸವೀ ಪೂರ್ವ ೯೮೦ ರಿಂದ ಇಸವೀ ಶಕ ೯೦೦ ರರ ವರೆಗೆ ಶಂಕರಾಚಾರ್ಯರ ಕಾಲವನ್ನು ನಿರ್ಣಯಿಸುತ್ತಾರೆ. ಅದನ್ನು ಈ ಕೆಳಗೆ ಕೊಟ್ಟದೆ.

| | | |
|---|---|---|
| ಪಂ\|\| ಜ್ವಾಲಾಪ್ರಸಾದ ಮಿಶ್ರ | .... | ಕ್ರಿ. ಪೂ\|\| ೯೮೦ |
| ಕೆ. ಜಿ. ನಟೇಶ ಶಾಸ್ತ್ರಿ | .... | ಕ್ರಿ. ಪೂ\|\| ೫೭೯ |
| ಜಿನವಿಜಯ ಗ್ರಂಥ | .... | ಕ್ರಿ. ಪೂ\|\| ೫೪೨ |
| ಚಿತ್ಸುಖಾಚಾರ್ಯ, ಆನಂದಗಿರಿ, ವ್ಯಾಸಾಚಲ | | ಕ್ರಿ. ಪೂ\|\| ೫೦೭ |

| | | |
|---|---|---|
| ಡಾ|| ವಿನ್ಸೆಂಟ್, ಎ. ಬಿಸೆಂಟ್ | .... | ಕ್ರಿ. ಪೂ|| ೪೯೦ |
| ಪಂ|| ಇಂದ್ರನಾರಾಯಣ ದ್ವಿವೇದಿ | ... | ಕ್ರಿ. ಪೂ|| ೪೫೬ |
| ದ್ವಾರಕಾಮಠ | ... | ಕ್ರಿ. ಪೂ|| ೪೬೯ |
| ಶೃಂಗೇರಿ ಮಠ | ... | ಕ್ರಿ. ಪೂ|| ೪೮ |
| ಬಿ.ಜಿ. ತಿಲಕ, ಮ್ಯಾಕ್ಸ್‌ಮುಲ್ಲರ್, ಮೆಕ್ಡೊನಾಲ್ಡ | | ಕ್ರಿ. ಶ|| ೬೮೮ |
| ಭಟ್ಟ ಯಜ್ಞೇಶ್ವರಶರ್ಮ | ... | ಕ್ರಿ. ಶ|| ೭೯೦ |
| ಡಾ|| ಕೀತ್ | ... | ಕ್ರಿ. ಶ|| ೯೦೦ |

ಹೀಗೆ ಶಂಕರರ ಕಾಲಮಾನವು ಎರಡು ಸಾವಿರ ವರ್ಷಗಳ ಮಹಂತರದಲ್ಲಿ ಅತ್ಯಂತ ಅನಿಶ್ಚಿತವಾದಕಾರಣ, ಕೆಲವರು ಶಂಕರಾಚಾರ್ಯರು ಇಬ್ಬರು ಎಂತಲೂ, ಹೇಳುವರು. ಅಂತು; ಹೇಗೂ ಇರಲಿ " ಮಠದ ಸಂಪ್ರದಾಯದಲ್ಲಿ ಸನ್ಯಾಸ ಪರಂಪರೆಯು ಶಂಕರಾಚಾರ್ಯರಿಂದಲೇ ಪ್ರಾರಂಭಿಸಲ್ಪಟ್ಟಿತೆಂಬುದರಲ್ಲಿ ಮತಭೇದವಿಲ್ಲ. ಶೃಂಗೇರಿ ಮಠದಲ್ಲಿ, ಈ ವರೆಗೆ ಸುರೇಶ್ವರಾಚಾರ್ಯರಿಂದ ೩೪ ತಲೆ ಕಳೆದಿದೆ. ಪ್ರಕೃತ ಇತಿಹಾಸದ ವಿಷಯವಾದ ಗೋಕರ್ಣದ ರಘೂತ್ತಮ ಮಠ ( ರಾಮಚಂದ್ರಪುರಮಠ ) ದಲ್ಲೂ ಸುರೇಶ್ವರರಿಂದ ೩೪ ನೇ ತಲೆಯವರೇ ವರ್ತಮಾನರಾಗಿದ್ದಾರೆ. ದ್ವಾರಕಾ ಮಠದಲ್ಲೂ ಈಗ ೩೫ನೇ ತಲೆಯವರಿದ್ದಾರೆ. ಈ ಎಲ್ಲ ಕಾರಣಗಳಿಂದ ಈ ಮಠಗಳು ಸಮಾನಕಾಲದಲ್ಲೇ ಸ್ಥಾಪಿತವಾಗಿವೆಯೆಂದು ಹೇಳಬಹುದು. " ಪ್ರಕೃತ ಗ್ರಂಥಕ್ಕೆ ಶ್ರೀ|| ಬಿ. ಜಿ. ತಿಲಕರು ನಿಶ್ಚಯಿಸಿದ ಕಾಲವೇ ಹೆಚ್ಚು ಹೊಂದಿಕೆಯಾಗಿದ್ದರಿಂದ ಇದನ್ನೇ ಶಂಕರಾಚಾರ್ಯರ ಕಾಲವೆಂದು ಗ್ರಾಹ್ಯ ಮಾಡಲಾಗಿದೆ.

" ಮಠ " ಶಬ್ದವು ಪ್ರಾಚೀನ ಕಾಲದಲ್ಲಿ ವಿದ್ಯಾರ್ಥಿ ಭವನಗಳಿಗೆ ಉಪಯೋಗಿಸಲ್ಪಡುತ್ತಿತ್ತೆಂದು ಸ್ಕಂದ ಪುರಾಣಾದಿಗಳಿಂದ ತಿಳಿದುಬರುತ್ತದೆ. ಜೈನ ಬೌದ್ಧಾದಿಗಳು ತಮ್ಮ ಮತಪ್ರಚಾರ ಸಂಸ್ಥೆಗಳಿಗೆ " ಮಠ " ವೆಂತ ಸಂಬೋಧಿಸಿದರು. ನಂತರ ಶಂಕರಾಚಾರ್ಯರು ಲುಪ್ತಪ್ರಾಯವಾದ ವೈದಿಕ ಧರ್ಮದ ಆಶ್ರಮ ವ್ಯವಸ್ಥೆಯಲ್ಲಿ ಕೊನೆಯದಾದ ಸನ್ಯಾಸ ಪರಂಪರೆಯನ್ನು ಅವಿಚ್ಛಿನ್ನವಾಗಿ ನಡೆಸಿಕೊಂಡು ಹೋಗುವ ಉದ್ದೇಶ್ಯದಿಂದಲೂ, ಬ್ರಾಹ್ಮಣ ಧರ್ಮದ ಸಂಸ್ಕೃತಿ ಸಂಪ್ರದಾಯಗಳ ನ್ಯೂನಾತಿರಿಕ್ತಗಳನ್ನು ನಿಯಮನಗೊಳಿಸುತ್ತ ಯೋಗ್ಯ ಶಾಸನ ನಡೆಸುವುದಕ್ಕಾಗಿಯೂ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿದರು.

ಜೈನ, ಬೌದ್ಧ ಮತಗಳ ಅವನತಿಯ ನಂತರ ಸ್ಮಾರ್ತ, ವೈಷ್ಣವ

ಶ್ರೀ ವೈಷ್ಣವ, ಎಂಬ ಮತತ್ರಯಗಳು ಬ್ರಾಹ್ಮಣರಲ್ಲುಂಟಾಯಿತು. ಕ್ರಿ. ಶ. ೬ ನೇ ಶತಮಾನದಿಂದ ೧೨ ನೇ ಶತಮಾನದವರೆಗೂ ಶೈವ, ವೈಷ್ಣವ, ಗಾಣಪತ್ಯ, ಶಾಕ್ತ ಮುಂತಾದ ಉಪಾಸನಾ ದೇವತಾ ಪ್ರಾಧಾನ್ಯದಿಂದ ಅನೇಕ ಸಂಪ್ರದಾಯಗಳುಂಟಾದವು. ಇವುಗಳಲ್ಲಿ ಹೆಚ್ಚು ಸಂಪ್ರದಾಯಗಳ ಮೂಲವು ವೇದದಲ್ಲೇ ಇದ್ದು ವೈದಿಕ ಸಂಪ್ರದಾಯಗಳೇ ಆದರೂ, ಕೆಲವು ಶುದ್ಧ ವೈದಿಕವೆನ್ನಲಾಗದ ಅವೈದಿಕ ಆಗಮಗಳೂ ಹೊರಟವು. ೧೨ ನೇ ಶತಮಾನದಲ್ಲೇ ಬಸವೇಶ್ವರನಿಂದ ವೀರಶೈವ ಮತದ ಪ್ರಚಾರವಾಯಿತು. ಇದೇ ಶತಮಾನದಿಂದಲೇ ಆಹಾರ, ರೀತಿ, ರಿವಾಜನ್ನನುಸರಿಸಿ ಪಂಚ ದ್ರಾವಿಡ, ಪಂಚ ಗೌಡ ಎಂಬ ದಶವಿಧ ಬ್ರಾಹ್ಮಣ ಭೇದ ಉಂಟಾಯಿತು. ಅಜ್ಞಾನ ಮತ್ತು ಸಂಕುಚಿತ ದೃಷ್ಟಿಯಿಂದ ಈ ಸಂಪ್ರದಾಯಗಳಲ್ಲಿ ಪರಸ್ಪರ ರಾಗ-ದ್ವೇಷಗಳೂ ಬೆಳೆದವು.

೧೨ ನೇ ಶತಮಾನದಿಂದ ವಿದೇಶಿ ಧರ್ಮಗಳ ಪ್ರಭಾವವು ಹಿಂದೂ ಧರ್ಮದಮೇಲೆ ಆಗತೊಡಗಿತು.. ಹಿಂದೂ ಮತ್ತೂ ಇಸ್ಲಾಂ ಧರ್ಮಗಳ ಒಂದೆರಡು ಉಚ್ಚ ಸಿದ್ಧಾಂತಗಳು ಪರಸ್ಪರ ಹೋಲುತ್ತಿದ್ದರೂ, ಇವೆರಡೂ ಧರ್ಮಾನುಯಾಯಿಗಳ ಬಾಹ್ಯದ ಆಚಾರ, ವ್ಯವಹಾರಗಳು ತೀರಾ ಭಿನ್ನವಾಗಿದ್ದವು. ಈ ಪರಿಸ್ಥಿತಿಯಲ್ಲಿ ಪರಸ್ಪರ ಸೌಹಾರ್ದ ಬೆಳೆಸುವ ಅನೇಕ ಪ್ರಯತ್ನಗಳ ಫಲಿತಾಂಶವಾಗಿ " ಸೀಖಮತ " " ಕಬೀರಪಂಥ " " ದಾದೂಪಂಥ '' ಸಂತ ಸಂಪ್ರದಾಯ, ಮುಂತಾದುವು ಹುಟ್ಟಿಕೊಂಡವು. ಮುಸ್ಲಿಂ ಧರ್ಮದಲ್ಲೂ ಹಿಂದೂ ಧರ್ಮದಿಂದ ಪ್ರಭಾವಿತವಾದ '' ಸೂಫೀ '' ಸಂಪ್ರದಾಯವೆಂಬ ಶಾಖೆಯೂ ಒಡೆಯಿತು.

ಹೀಗೆ ೧೨ ನೇ ಶತಮಾನದಿಂದ ೧೮ ಶತಮಾನದವರೆಗೂ ಹಿಂದೂ ಮುಸ್ಲಿಂ ಘರ್ಷಣೆಗಳ ಫಲವಾಗಿ ಅನೇಕ ಸಂಪ್ರದಾಯ ಪಂಥಗಳು ಹುಟ್ಟಿಕೊಂಡವು. ಈ ಪಂಥ ಪ್ರವರ್ತಕರ ಲಕ್ಷ್ಯವೇನೇ ಇರಲಿ; ಸಾಮಾನ್ಯ ಜನತೆಯಲ್ಲಿ ಇದರ ಪರಿಣಾಮವು ವಿಪರೀತವಾಯಿತು. ಜಾತಿ-ನೀತಿಗಳ ಕಟ್ಟು ಸಡಿಲಾಯಿತು; ವರ್ಣವ್ಯವಸ್ಥೆ ಶಿಥಿಲವಾಯಿತು; ಹಿಂದೂ ಮುಸ್ಲಿಂ ಐಕ್ಯವಾಗಲೀ, ಜಾತಿ ಭೇದದ ನಿವಾರಣೆಯಾಗಲೀ, ಸಾಧಿಸುವ ಬದಲು ಮೂರನ್ನು ಒಂದುಗೂಡಿಸ ಹೋಗಿ ಮುನ್ನೂರಾಯಿತು. ಸಗುಣ ನಿರ್ಗುಣ ಉಪಾಸನೆಯೂ, ಕೆಲವು ಸಂತರ ವಚನಗಳೂ, ಸಾಮಾನ್ಯಜನರಲ್ಲಿ ಅಪಾರ್ಥ ಕಲ್ಪನೆಯಾಗಿ ಸಮಾಜದಲ್ಲಿ ವ್ಯವಸ್ಥೆ ಮತ್ತು ಕರ್ಮಕಾಂಡಗಳು ಶಿಥಿಲ ಹೊಂದಿದವು. ಉತ್ತರದಲ್ಲಿ ತುಲಸೀದಾಸ, ದಕ್ಷಿಣದಲ್ಲಿ ರಾಮದಾಸ ಮತ್ತು ವಿದ್ಯಾರಣ್ಯರ ವಿಶ್ವ ಪ್ರಯತ್ನದಿಂದ

ಅಂತೂ ಇಂತೂ ಸನಾತನ ವೈದಿಕ ಧರ್ಮವು ಜೀವಹಿಡಿದು ನಿಂತಿತ್ತು. ಆದರೆ ವೈದಿಕ ಧರ್ಮಾನುಯಾಯಿಗಳ ಸಂಖ್ಯೆ ಕಡಿಮೆಯಾಗಿ ಅವೈದಿಕ ಸಂಪ್ರದಾಯಗಳ ಪ್ರಾಬಲ್ಯ ಹೆಚ್ಚಿತು.

ಹಿಂದೂಮತವು ಹಲವು ಒಡಕುಗಳಿಂದ; ಅಸ್ತ-ವ್ಯಸ್ತ ವಿಚಾರಧಾರೆಗಳಿಂದ ದುರ್ಬಲವಾಗಿರುವ ಇದೇ ಸಮಯದಲ್ಲಿ ಕ್ರೈಸ್ತ ಧರ್ಮದ ಮೋಹಿನೀ ಆಕ್ರಮಣವೂ ನಡೆಯಿತು. ಇವರು ಅಲ್ಲಲ್ಲಿ ವೈದ್ಯಶಾಲೆ, ವಿದ್ಯಾಲಯಗಳನ್ನು ತೆರೆದರು. ದೇಶೀ ಭಾಷೆಗಳಲ್ಲಿ ಕ್ರೈಸ್ತಮತ ಗ್ರಂಥಗಳನ್ನು ಒಳ್ಳೇ ರೋಚಕ ಭಾಷೆ, ಶೈಲಿಗಳಿಂದ ಬರೆದು ಉಚಿತವಾಗಿ ಹಂಚಿದರು. ಸುಹೃತ್ಸಂಹಿತೆಗಳಾದ ಪುರಾಣಾದಿಗಳ ವಿಚಿತ್ರಭಾಷೆಗೆ ಅಪಾರ್ಥ ಕಲ್ಪನೆಮಾಡಿ ಕುಚೋದ್ಯಮಾಡಿದರು. ವೇದಾದಿಗಳೆಲ್ಲವೂ ಅರ್ವಾಚೀನವೆಂದೂ, ಆರ್ಯರು ಹೊರಗಿನಿಂದ ಹಿಂದೂ ದೇಶಕ್ಕೆ ಬಂದವರೆಂದೂ, ಸಿದ್ಧಾಂತಮಾಡಿದರು. ಹಿಂದೂಸಾಹಿತ್ಯದ ಜೀವಾಳವಾದ ಸಂಸ್ಕೃತಭಾಷೆಗೆ ಪ್ರಾಶಸ್ತ್ಯ ಕಡಿಮೆಮಾಡಿ, ಇಂಗ್ಲಿಷ್ ಭಾಷೆಗೆ ವಿಶೇಷ ಗೌರವಾದರಗಳನ್ನಿಟ್ಟರು. ವೇದೋಪನಿಷತ್ತುಗಳನ್ನೆಲ್ಲಾ ವಿದೇಶೀ ವಿಚಾರ ಧಾರೆಗನುಸರಿಸಿ, ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡಿದರು. ಕ್ರೈಸ್ತಧರ್ಮಕ್ಕೆ ಸೇರಿದವರಿಗೆ, ಪಾಶ್ಚಾತ್ಯ ವಿಚಾರಧಾರೆಯನ್ನನುಸರಿಸಿದವರಿಗೆ ಎಲ್ಲಿಲ್ಲದ ಮರ್ಯಾದೆ ಗೌರವಗಳನ್ನಿತ್ತರು; ದೊಡ್ಡ ಅಧಿಕಾರಗಳನ್ನಿತ್ತರು. ಪ್ರತಿವರ್ಷವೂ ಹಿಂದೂ ಧರ್ಮ ವಿರೋಧೀ " ಸ್ನಾತಕ ಹಿಂದೂ ಯುವಕರು " ನೂರಾರು ಸಾವಿರಾರು ಸಂಖ್ಯೆಯಲ್ಲಿ ವಿಶ್ವವಿದ್ಯಾ ನಿಲಯಗಳಿಂದ ಹೊರಟು, ಕ್ರೈಸ್ತಧರ್ಮ ಪ್ರಚಾರಕರಾದರು. ಹಿಂದೂಗಳಾಗಿದ್ದುಕೊಂಡೇ ಶುದ್ಧ ಕ್ರಿಶ್ಚಿಯನರಾದರು.

" ಇತಿಹಾಸವು ಪಾಶ್ಚಾತ್ಯ ದೃಷ್ಟಿಕೋನದಿಂದಲೇ ಶೋಧಿಸಿ ಬರೆಯಲ್ಪಟ್ಟಿತು. ಧಾರ್ಮಿಕಕ್ಕಿಂತ ರಾಜಕೀಯಕ್ಕೇ ಪ್ರಾಮುಖ್ಯತೆ ಬಂತು. ಅನೇಕ ಹಿಂದೂ ವಿದ್ವಾಂಸರು, ಹಿಂದೂ ಧರ್ಮಕ್ಕೆ ವಿರೋಧ ಭಾವನೆಯುಳ್ಳವರಾದರು. ಕ್ರೈಸ್ತ ಮಿಷನರಿಗಳು ಹಿಂದೂ ಪುರಾಣಗಳ ಕ್ಷೀರಸಾಗರ, ಭೂಗೋಳ ವರ್ಣನೆ, ಸೂರ್ಯ ಚಂದ್ರರನ್ನು ರಾಹು ನುಂಗುವುದು, ಹತ್ತು ತಲೆಯ ರಾವಣ, ಆನೆಯಮುಖದ ಗಣಪತಿ, ಈ ಮುಂತಾದ ವಿಚಿತ್ರಗಳನ್ನೆಲ್ಲಾ ಅಪಹಾಸ್ಯಮಾಡಿ ಅನೇಕ ಗ್ರಂಥಗಳನ್ನು ಪ್ರಚಾರಮಾಡಿದರು. ಸಹಗಮನ ಬಾಲವಿವಾಹ, ವಿಧವಾ ಜೀವನ ಮುಂತಾದವುಗಳೆಲ್ಲಾ ನಿರ್ದಯ ಅತ್ಯಾಚಾರಗಳೆಂದು ಸಿದ್ಧಮಾಡಿ ತೋರಿಸಿದರು. ಬಂಗಾಳದ ರಾಜಾ ರಾಮಮೋಹನರಾಯನು ಹಿಂದು, ಮುಸ್ಲಿಂ, ಕ್ರೈಸ್ತಮತಗಳಲ್ಲಿನ ಸಮಾನತತ್ವಗಳಷ್ಟನ್ನೇ ಸೇರಿಸಿ, " ಬ್ರಹ್ಮ ಸಮಾಜ " ವೆಂಬ

ಹೊಸದೊಂದು ಪಂಥವನ್ನು ಕ್ರಿ. ಶಕ ೧೮೬೯ ರಲ್ಲಿ ನಿರ್ಮಿಸಿ, ಹತ್ತಾರಕೂಡ ಹನ್ನೊಂದು ಮಾಡಿಟ್ಟನು. ೧೮೭೫ ರಲ್ಲಿ ಮಹರ್ಷಿ ದಯಾನಂದ ಸರಸ್ವತೀ ಎಂಬುವರು ವೇದವೊಂದೇ ಈಶ್ವರ ವಾಕ್ಯವೆಂದು ಸಿದ್ಧಾಂತಮಾಡಿ, " ಆರ್ಯ ಸಮಾಜ " ವೆಂಬ ಮತ್ತೊಂದು ಸಮಾಜವನ್ನು ಕಟ್ಟಿದರು. ಇವರು ವೇದವನ್ನು ಒಪ್ಪಿದರೂ ಜಾತಿಭೇದ, ಜನ್ಮಸಾವರ್ಣವ್ಯವಸ್ಥೆ, ಮೂರ್ತಿಪೂಜೆ, ಶ್ರಾದ್ಧ ಮುಂತಾದವುಗಳನ್ನೊಪ್ಪದೆ; ಪುರಾಣ, ಸ್ಮೃತಿ ಗ್ರಂಥಗಳನ್ನು ಖಂಡಿಸಿ, ವೈದಿಕ ಸನಾತನಧರ್ಮ ವೃಕ್ಷದ ತಲೆಕಡಿದು ಬುಡಕ್ಕೆಹಾಕಿದಂತೆ ಮಾಡಿದರು. " ಇದೇ ಸಮಯದಲ್ಲೇ ಮ್ಯಾಡಂ ಬ್ಲಾವಟ್ಸ್ಕಿ ಮತ್ತು ಕರ್ನಲ್ ಅಲ್‌ಕಾಟ್, ಎಂಬಿಬ್ಬರು ದಯಾನಂದರ ಆಮಂತ್ರಣದ ಮೇರೆಗೆ ಹಿಂದೂಸ್ಥಾನಕ್ಕೆ ಬಂದು ಇಲ್ಲಿ ಒಂದು " ಥಿಯಾಸಫಿಕಲ್ ಸೊಸೈಟಿ " ಯನ್ನು ಸ್ಥಾಪಿಸಿದರು. ಇವೆಲ್ಲ ಸಮಾಜ ಸಂಸ್ಥೆಗಳೂ, ಸನಾತನ ಧರ್ಮದ ವಿರೋಧೀಧೋರಣೆಯಿಂದಲೇ ಕೂಡಿದ್ದವೆಂದು ಹೊಸದಾಗಿ ಹೇಳಬೇಕಾಗಿಲ್ಲ. ಈ ಎಲ್ಲ ಅಂದೋಲನದ ಪರಿಣಾಮವಾಗಿ, ಹಿಂದುವೂ ಅಲ್ಲ, ಮುಸ್ಲೀಮನೂ ಅಲ್ಲ, ಕ್ರೈಸ್ತನೂ ಅಲ್ಲ, ಅಂಥದೊಂದು ಮಧ್ಯವರ್ತೀ ಹೊಸ ಸಮಾಜವೇ ನಿರ್ಮಾಣವಾಯಿತು. ಮತಪ್ರಚಾರ, ಮತಾಂತರ ಗೊಳಿಸುವುದೂ, ಸಂಖ್ಯಾಬಲ ಹೆಚ್ಚಿಸುವುದೂ ಎಲ್ಲ ಧರ್ಮದವರ ಮುಖ್ಯ ಕರ್ತವ್ಯವಾಯಿತು.

ಹಿಂದೂಧರ್ಮದ ಆಧಾರಸ್ಥಂಭವಾದ ಶೃತಿ, ಸ್ಮೃತಿ, ಪುರಾಣಗಳ ಜ್ಞಾನವು ಅಗತ್ಯವಾಗಿರಲೇಬೇಕಾದ ಬ್ರಾಹ್ಮಣನಿಗೂ ಇಂದು ಇಲ್ಲ. ಈ ವಿದ್ಯೆಗೆ ಸಮಾಜದಲ್ಲಾಗಲೀ, ರಾಜ್ಯದಲ್ಲಾಗಲೀ ಗೌರವಾದರಗಳು ಸಾಕಷ್ಟಿಲ್ಲ. ಮೇಲಾಗಿ ಈ ವಿದ್ಯೆಗಳಮೇಲೆ, ಹಾಗೂ ಸನಾತನ ವೈದಿಕ ಧರ್ಮದ ಆಚಾರಗಳ ಮೇಲೆ ಹಿಂದೂ ವಿದ್ವಾಂಸರದ್ದೇ ನಿಂದಾತ್ಮಕ ಟೀಕೆ ಟಿಪ್ಪಣಿಗಳು ಬೇರೆ. ಒಬ್ಬ ವಿದ್ವಾಂಸನು ಪುರಾಣಗಳೆಲ್ಲಾ ಸುಳ್ಳೆಂದರೆ ಮತ್ತೊಬ್ಬನು ವಿಗ್ರಹಾರಾಧನೆ, ಶ್ರಾದ್ಧಾದಿಗಳು ಹಿಂದೂ ಧರ್ಮ ಶಾಸ್ತ್ರಗಳಲ್ಲೆಲ್ಲೂ ಹೇಳಲೇ ಇಲ್ಲವೆನ್ನುತ್ತಾನೆ. ಒಬ್ಬನು ಹೌದೆನ್ನುತ್ತಾನೆ, ಇನ್ನೊಬ್ಬನು ಅಲ್ಲವೆನ್ನುತ್ತಾನೆ. ಒಬ್ಬನು ಹುಗಿಯಬೇಕೆಂದರೆ ಇನ್ನೊಬ್ಬನು ಸುಡಬೇಕೆನ್ನುತ್ತಾನೆ. ಸನಾತನಿಗಳೆಂದುಕೊಳ್ಳುವ ಬ್ರಾಹ್ಮಣರಲ್ಲೂ ವೈಷ್ಣವ, ಸ್ಮಾರ್ತ, ಶ್ರೀವೈಷ್ಣವ ಇತ್ಯಾದಿ ಬಡಿದಾಟಬೇರೆ. ಈ ಬಗೆಯಾಗಿ ನೂರಾರು ಸಾವಿರಾರು ಮತ, ಪಂಥ, ಸಂಸ್ಥೆ, ಸಮಾಜ, ಸಂಪ್ರದಾಯಗಳ ಮಧ್ಯೆ; ಗಾಂಧೀವಾದ, ಸಮಾಜವಾದ, ಸಮತಾವಾದ, ಸಾಮ್ರಾಜ್ಯವಾದ ಈ ಮುಂತಾದ ವಾದಿರಾಜರ ತಂಡ ಬೇರೆ. ಹೀಗಾಗಿ ಹಿಂದುಗಳ ದೌರ್ಬಲ್ಯವು ದಿನೇ ದಿನೇ ಹೆಚ್ಚುತ್ತಿದೆ.

ಮಹಾಭಾರತ ಯುದ್ಧಾನಂತರದಲ್ಲಿ ಅಂದರೆ, ಕಲಿಯುಗಾರಂಭದಿಂದ ಈ ವರೆಗೆ ನಡೆದ ಧಾರ್ಮಿಕ ಕ್ರಾಂತಿಯ ಸಿಂಹಾವಲೋಕನ ಮಾಡಿದ್ದಾಯಿತು. ಇದರಿಂದ ಸಿದ್ಧವಾಗುವುದೇನೆಂದರೆ ಜಗತ್ತಿನ ನಾನಾತ್ವವು ಅನಿವಾರ್ಯವಾದದ್ದು. ಈ ನಾನಾತ್ವವನ್ನು ಒಂದುಗೂಡಿಸುವುದು ಅಸಂಭವಮಾತ್ರವಲ್ಲ; ಅಪಾಯಕರವೂ ಹೌದು. ವಸ್ತುತಃ ನಾನಾತ್ವದಿಂದ ಯಾವ ಅನಿಷ್ಟವೂ ಉಂಟಾಗಲಾರದು. ಎಲ್ಲ ಅನರ್ಥಗಳ ಮೂಲವು ಈ ಅನೇಕತ್ವದ ಅಂತಸ್ಥಲದಲ್ಲಿ ವ್ಯಾಪಕವಾದ "ಏಕಮೇವಾದ್ವಿತೀಯ" ತತ್ವವನ್ನು ನಿರೀಕ್ಷಿಸುವ ಸಮತ್ವಭಾವನೆಯ ಅಭಾವವೇ ಆಗಿದೆ.

ಭರತಖಂಡವು ಇಂದು ಸ್ವತಂತ್ರವಾಗಿದೆ. ಉಚ್ಚವಾದ ಧರ್ಮಾತೀತ ಮನೋವೃತ್ತಿಯ ಘೋಷಣೆಮಾಡಿದೆ. ಆದಾಗ್ಯೂ ಇಂದಿನ ಪರಿಸ್ಥಿತಿಯಲ್ಲಿ ಹಿಂದೂಧರ್ಮವು ಅಭೂತಪೂರ್ವ ಗಂಡಾಂತರದಲ್ಲಿದೆ. ದುರ್ಬಲ ವ್ಯಕ್ತಿಗಳ ಸಮಾಜವೂ, ದುರ್ಬಲ ಸಮಾಜದ ದೇಶವೂ ಗಂಡಾಂತರದಲ್ಲಿ ಬೀಳುವುದು ಸ್ವಾಭಾವಿಕ. ದುರ್ಬಲರಿಗೆ ಇಹಪರಗಳೆರಡರಲ್ಲೂ ಸ್ಥಾನವಿಲ್ಲ. ಹಿಂದೂಸ್ಥಾನದಲ್ಲಿ ಈಗಿರುವ ಪ್ರಧಾನ ದೌರ್ಬಲ್ಯವೆಂದರೆ ಧಾರ್ಮಿಕ ದೌರ್ಬಲ್ಯ. ಭಿನ್ನತ್ವದ ರೇಖೆ ವಿಸ್ತೃತವಾಗುತ್ತಲಿದೆ; ಇದನ್ನು ಮರೆತುಬಿಡಲಾಗದಷ್ಟು ತೀಕ್ಷ್ಣವಾಗುತ್ತಿದೆ. ಪರಧರ್ಮ ಸಹಿಷ್ಣುತೆಯಿಲ್ಲದ ಸ್ವಧರ್ಮನಿಷ್ಠೆಯಿಂದ ಎಷ್ಟು ಹಾನಿಯೋ ಸ್ವಧರ್ಮನಿಷ್ಠೆಯಿಲ್ಲದ ಪರಧರ್ಮ ಸಹಿಷ್ಣುತೆಯಿಂದಲೂ ಅಷ್ಟೇ ಅಪಾಯವಿದೆ. ಪ್ರತಿಯೊಂದು ಸಮಾಜವೂ ತನ್ನ ಅತೀತ ಇತಿಹಾಸವನ್ನರಿತು ಉಜ್ವಲತೆಯನ್ನು ಕಾಪಾಡಿಕೊಳ್ಳಬೇಕು. ಆಗಲೇ ಇತಿಹಾಸಕ್ಕೆ ಒಂದು ಪ್ರಯೋಜನವಾಗುವುದು.

ಪ್ರಕೃತ ಹವ್ಯಕ ಜನಾಂಗ ಮತ್ತು ಗುರುಮಠದ ಇತಿಹಾಸವನ್ನು ಬರೆಯುವ ಯೋಗ್ಯತೆಯು ನನ್ನದಲ್ಲ. ಗತ ಸಾವಿರಾರು ವರ್ಷಗಳ ಇತಿಹಾಸವನ್ನು ಕೇವಲ ಅಲ್ಲಿ ಇಲ್ಲಿ ಸಿಕ್ಕುವ ಆಧಾರಗಳಮೇಲೆ ಊಹಿಸಿಬರೆಯುವುದೊಂದು ಸುಲಭ ಕಾರ್ಯವಲ್ಲ. ಇತಿಹಾಸವೆಂದರೆ ಗತಘಟನೆಗಳ ಸತ್ಯ ಚಿತ್ರ. ಸತ್ಯದ ಶೋಧನೆ ಸಾಮಾನ್ಯವಲ್ಲ. ಅದಕ್ಕೆ ವಿಶೇಷ ಯೋಗ್ಯತೆಯ ಅವಶ್ಯಕತೆಯಿದೆ. ಇಂಥ ಗುರುತರವಾದ ಭಾರವನ್ನು ಹೊರುವುದು ನನ್ನ ಬಾಲಚೇಷ್ಟೆಯೇ ಹೊರತು ಮತ್ತೇನಲ್ಲ. ಈ ಕೆಲಸ ಮಾಡುವ ವಿದ್ವಾಂಸರು ಈ ಸಮಾಜದಲ್ಲೇ ಇದ್ದಾರೆ. ಆದಾಗ್ಯೂ ಸಂಯೋಗ ವಶಾತ್ ಈ ಭಾರ ನನ್ನಮೇಲೆಯೇ ಬಿದ್ದಿತು.

ಹವ್ಯಕ ಸಮಾಜ ಮತ್ತು ಗುರುಮಠದ ವಿಷಯವಾಗಿ ಇತಿಹಾಸ ಲೇಖನದಲ್ಲಿ ಇದೇ ಪ್ರಥಮ ಪ್ರಯತ್ನ. ಸುಮಾರು ೮೦ ವರ್ಷಗಳ ಹಿಂದೆ ಈ ಮಠದ ಅಧಿಪತಿಗಳಾಗಿದ್ದ ರಾಘವೇಶ್ವರ ಭಾರತೀ ಸ್ವಾಮಿಗಳವರು, " ಹವ್ಯಕೋತ್ಪತ್ತಿ ನಿರ್ಣಯ " ವೆಂಬ ಚಿಕ್ಕ ಪುಸ್ತಕವೊಂದನ್ನು ಪ್ರಕಟಿಸಿದ್ದರು. ಆದರೆ ಅದು " ಉತ್ತರ ಸಹ್ಯಾದ್ರಿ ಖಂಡ " ದ ಶ್ಲೋಕ ಮತ್ತು ಅನುವಾದದಿಂದ ಮಾತ್ರ ಕೂಡಿತ್ತು. ಹೀಗೆ ಅಲ್ಲಲ್ಲಿ ಪ್ರಕಟವಾದ ಒಂದೆರಡು ಚಿಕ್ಕ ಪ್ರಬಂಧಗಳೂ, ವಿಶೇಷತಃ ಐತಿಹಾಸಿಕ ದೃಷ್ಟಿಯಿಂದ ಬರೆಯಲ್ಪಟ್ಟದ್ದಾಗಿರಲಿಲ್ಲ. ಸುಮಾರು ೧೫ ವರ್ಷಗಳ ಕೆಳಗೆ ಸ್ವತಃ ಲೇಖಕನಿಂದ " ಹವ್ಯಕಸಮಾಜವೂ ಗುರುಮಠವೂ " ಎಂಬ ಚಿಕ್ಕಲೇಖನವೊಂದು ಬರೆಯಲ್ಪಟ್ಟು ಬೆಂಗಳೂರಿನ " ಸುಬೋಧ " ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆದರೆ ಇವೆಲ್ಲಕ್ಕಿಂತಲೂ ಈ ಗ್ರಂಥವು ಹೆಚ್ಚು ಶೋಧಪೂರ್ವಕವಾಗಿ ವಿಸ್ತಾರಗೊಳಿಸಲ್ಪಟ್ಟಿದೆ.

ಆದಾಗ್ಯೂ ಇನ್ನೂ ಶೋಧಿಸಬೇಕಾದ ವಿಷಯಗಳು ಉಳಿದಿವೆ. ಅದಕ್ಕೆ ನನಗೆ ಸಾಕಷ್ಟು ಅವಕಾಶ ಮತ್ತು ಆಧಾರಗಳು ದೊರಕಲಿಲ್ಲ. ಮುಖ್ಯವಾದುದೆಂದರೆ " ಅಹಿಚ್ಛತ್ರ " ದ ವರ್ತಮಾನ ಪ್ರದೇಶ ಯಾವುದು ? ಎಂಬುದೇ ಆಗಿದೆ. ಆ ಬಗ್ಗೆ ವಿದ್ವಾಂಸರು ಒಂದೆರಡು ಪ್ರದೇಶಗಳನ್ನು ಗುರ್ತಿಸುವರಾದರೂ ಅದಿನ್ನೂ ನಿಶ್ಚಿತವಾಗಿಲ್ಲವೆಂದು, ನನ್ನ ಅಭಿಪ್ರಾಯ. ಆ ವಿಚಾರದಲ್ಲಿ ನಾನಿನ್ನೂ ಶೋಧದಲ್ಲಿರುವೆನಾದ್ದರಿಂದ ಇಲ್ಲಿ ಹೆಚ್ಚಿಗೆ ಏನೂ ಬರೆಯಲಾರದವನಾಗಿದ್ದೇನೆ.

ಈ ಚಿಕ್ಕಸಮಾಜದ ಜನಸಂಖ್ಯೆ, ಆರ್ಥಿಕ ಸ್ಥಿತಿ, ವಿದ್ಯಾಭ್ಯಾಸ ಮುಂತಾದವುಗಳನ್ನು ನಿಶ್ಚಿತರೂಪದಿಂದ ನಿರ್ಧರಿಸಲಾಗದಿದ್ದರೂ, ಸಾಧ್ಯವಾದನುಟ್ಟಿಗೂ, ಸತ್ಯಕ್ಕೆ ಹೆಚ್ಚುದೂರವಾಗದಂತೆ ನೋಡಿಕೊಳ್ಳಲಾಗಿದೆ. ಮಠದ ಇತಿಹಾಸದ ವಿಷಯದಲ್ಲಿಯೂ ಸಿಕ್ಕಿದಷ್ಟು ಹಳೆಯ ಕಾಗದ ಪತ್ರಗಳು, ತಾಮ್ರಶಾಸನಗಳು, ಲೋಕೋಕ್ತಿಗಳನ್ನೆಲ್ಲಾ ಸಂಗ್ರಹಿಸಿ, ಚರಿತ್ರೆಯನ್ನು ಸಿದ್ಧಪಡಿಸಲಾಗಿದೆ. ಆದರೂ ಇದು ಸರ್ವಾಂಗ ಪೂರ್ಣವಾಗಿಲ್ಲವೆಂಬುದು ನಿಶ್ಚಯವೇ ಸರಿ. ಇದಕ್ಕೆ ಕಾರಣವೂ ಇದೆ. ಮೊದಲನೆಯದಾಗಿ ಈ ರೀತಿಯಾದ ಚರಿತ್ರೆಯನ್ನು ಸಂಗ್ರಹಿಸಿ ಬರೆಯುವ ಪ್ರಥಮ ಪ್ರಯಾಸ; ಎರಡನೆಯದಾಗಿ ಲೇಖಕನು, ಇತಿಹಾಸದ ವಿಶೇಷಜ್ಞನಲ್ಲ, ವಿದ್ವಾಂಸನಲ್ಲ, ಸಂಶೋಧಕನೂ ಅಲ್ಲ. ಮೂರನೆಯ ಕಾರಣವೆಂದರೆ ಇದು ವರೆಗೆ ಸಾಕಷ್ಟು ಆಧಾರಗಳು ದೊರಕಲಿಲ್ಲ. ಇವೆಲ್ಲಕಾರಣಗಳಿಂದ ಇದೊಂದು ಮೊಟ್ಟಮೊದಲನೆಯ ಕರಡು ಪ್ರತಿಯಂತಾಗಿದೆ. ಇದರ ಸಂಶೋಧನೆ ಪರಿಷ್ಕರಣ ಮತ್ತು ಪರಿವರ್ಧನೆಯಕೆಲಸ ವಿದ್ವಾನ್ ಸಮಾಜದ ಬಂಧುಗಳಕಡೆಗೆ ಇದೆ.

ಅನಿವಾರ್ಯವಾಗಿಯೇ ಬೆಳೆದು ಬಂದ ಈ ಪೀಠಿಕೆಯನ್ನು ಮುಗಿಸುವ ಮೊದಲು ಮಠ ಮತ್ತು ಸಮಾಜಗಳ ಪರಸ್ಪರ ಸಂಬಂಧ ಹಾಗೂ ಕರ್ತವ್ಯದ ಬಗ್ಗೆ ನನಗೆ ಸೂಕ್ತವೆಂದು ತೋರಿದ ನಾಲ್ಕು ಮಾತುಗಳನ್ನು ಬರೆಯುವುದು ಅಧಿಕ ಪ್ರಸಂಗವಾಗಲಿಕ್ಕಿಲ್ಲ. ಮನುಷ್ಯಸಮಾಜವು ಧರ್ಮ ಮತ್ತು ಅರ್ಥ ಈ ಎರಡು ಸಾಧನೆಗಳಿಲ್ಲದೆ ಇತರ ಪ್ರಾಣಿಗಳಿಗಿಂತ ಬೇರೆ ವೈಶಿಷ್ಟ್ಯ ಉಳ್ಳದ್ದಾಗಿ, ಉಳಿಯ ಲಾರದು. ಅರ್ಥದ ಉತ್ಪತ್ತಿ ಹಾಗೂ, ವಿನಿಮಯದ ಸುವ್ಯವಸ್ಥೆಯನ್ನು ರಾಜ್ಯ ( Government ) ವು ನೋಡಿಕೊಳ್ಳುತ್ತದೆ. ಧರ್ಮದ ವ್ಯಾವಹಾರಿಕ ರೂಪ ವನ್ನು ಮಠಾಧಿಪತಿಗಳು ನೋಡಿಕೊಳ್ಳುತ್ತಾರೆ. ರಾಜಕೀಯಕ್ಕೂ ಸಮಾಜಕ್ಕೂ ಹೇಗೆ ಅಚ್ಛೇದ್ಯ ಸಂಬಂಧವಿರುವುದೋ ಹಾಗೆ ಸಮಾಜಕ್ಕೂ ಧರ್ಮ ಪೀಠಗಳಿಗೂ, ಸಂಬಂಧವಿದೆ.

ಏಕಮೇವಾ ದ್ವಿತೀಯವೂ, ಅವ್ಯಕ್ತವೂ ಆದ ಪರಬ್ರಹ್ಮಕ್ಕೂ, ಸಗುಣ ವ್ಯಕ್ತರೂಪದಲ್ಲಿ ನಾನಾತ್ವವು ವ್ಯಾವಹಾರಿಕ ಅಥವಾ ಪ್ರಾತಿಭಾಸಿಕವಾಗಿರುವಂತೆ ಧರ್ಮದ ವ್ಯಾವಹಾರಿಕ ರೂಪವೂ ನಾನಾವಿಧವಾಗಿದೆ. ಅತ್ಯಂತ ಗಹನವೂ, ಜಟಿಲವೂ ಆದ ಕರ್ಮಮಾರ್ಗದಲ್ಲಿ ಧರ್ಮದ ಯೋಗ್ಯ ಸಂಯೋಜನೆಮಾಡಿಕೊಂಡು ಧರ್ಮಾಂತರವಾಗದಂತೆ ನಡೆದುಕೊಂಡು ಹೋಗುವುದು ಅತ್ಯಂತ ಕಠಿಣ. ಇದರ ನಿಯಂತ್ರಣಕ್ಕಾಗಿಯೇ ಶಂಕರಾಚಾರ್ಯರು ಈಗ ಸಾವಿರಾರು ವರ್ಷಗಳ ಕೆಳಗೆ ಮಠ ಸ್ಥಾಪನೆ ಮಾಡಿದರು. ಪ್ರಾಚೀನ ವೈದಿಕ ಸಂಸ್ಕೃತಿಯ ರಕ್ಷಣೆಯು ಮುಖ್ಯವಾಗಿ ಮಠಗಳಿಂದಲೇ ಆಗಬೇಕಾಗಿದೆ. ಆಶ್ರಮ ಧರ್ಮಗಳಲ್ಲೆಲ್ಲಾ ಅತ್ಯುಚ್ಚವಾದರೂ, ಕಷ್ಟತಮವಾದ ಸಂನ್ಯಾಸಕ್ಕೆ ಗೌಣತ್ವಪ್ರಾಪ್ತವಾಗುವದಂ- ತಿರಲಿ; ನಾಮಶೇಷವೇ ಆಗಿಹೋಗದಂತೆ ಶ್ರೀಮದಾಚಾರ್ಯರ ಕಾಲದಿಂದ ಈ ವರೆಗೂ ತಪ್ಪದೆ ಪರಂಪರಾಗತವಾಗಿ ಬಂದಿರುವುದು ಮುಖ್ಯವಾಗಿ ಈ ಮಠ ಸಂಪ್ರದಾಯದಿಂದಲೇ ಎಂದು ಧಾರಾಳವಾಗಿ ಹೇಳಬಹುದು.

ಮಠ ಸಂಪ್ರದಾಯದಲ್ಲಿ ಪೀಠ ಪರಂಪರೆಯೇ ಹೊರತು ವಂಶ ಪರಂಪರೆಯಿಲ್ಲ. ಧರ್ಮ ಪೀಠದ ಗುರುಗಳಾದರೂ ಸಮಾಜದ ಪ್ರಮುಖ ವ್ಯಕ್ತಿ ಗಳಿಂದ ಆರಿಸಲ್ಪಟ್ಟು ಪೀಠಾಧಿಷ್ಠಿತ ಗುರುಗಳ ಹಾಗೂ, ಸರ್ಕಾರದ ಸಮ್ಮತಿ ಯನ್ನು ಪಡೆಯಲಾಗುತ್ತದೆ. ಇದರಲ್ಲಿ ಈಗಿನ ಪ್ರಜಾಸತ್ತಾತ್ಮಕ ಚುನಾವಣೆಯ ದೋಷಗಳಾಗಲೀ ವಂಶಾನುಗತ ರಾಜಪರಂಪರೆಯದೋಷವಾಗಲೀ ಇಲ್ಲ. ಮೊದಲ ನೆಯದಾಗಿ ಸರ್ವಸಂಗ ಪರಿತ್ಯಾಗರೂಪವಾದ ಸಂನ್ಯಾಸವನ್ನು ಗ್ರಹಣಮಾಡ

ಬೇಕಾಗುತ್ತದೆ. ನಂತರ ಧರ್ಮ ನಿಯಂತ್ರಣಾಧಿಕಾರದ ಜವಾಬ್ದಾರಿಯು ಹೊರಿಸಲ್ಪಡುತ್ತದೆ. ಈ ಎಲ್ಲ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಹಿಂದೂ ಧರ್ಮ ಹಾಗೂ, ಸಂಸ್ಕೃತಿಯ ರಕ್ಷಣೆಗೆ ಈ ಮಠ ಸಂಪ್ರದಾಯಕ್ಕಿಂತಲೂ, ಯೋಗ್ಯವಾದ ಯಾವುದೇ ತರದ ಸಂಸ್ಥೆ ಅಥವಾ ವ್ಯವಸ್ಥೆಯನ್ನು ಮಾಡುವುದು ಖಂಡಿತವಾಗಿಯೂ, ಸಾಧ್ಯವಿಲ್ಲ.

ಸಮಾಜದ ಧಾರ್ಮಿಕ ನಿಯಂತ್ರಣ ಮತ್ತು ಸಂಸ್ಕೃತಿಯ ರಕ್ಷಣ ಈ ಎರಡೂ ಕೆಲಸಗಳೂ, ಮುಖ್ಯವಾಗಿ ಮಠಾಧಿಪತಿಗಳಿಂದಲೇ ಆಗಬೇಕು ಎಂಬುದು ನಿರ್ವಿವಾದ ವಿಚಾರ. ಆದರೆ ಈಗಿರುವ ಎಲ್ಲ ಮಠಗಳಿಂದ ಈ ಕೆಲಸ ಆಗಿದೆಯೆ? ಎಂದರೆ " ಇಲ್ಲ " ಎಂದು ಉತ್ತರ ಹೇಳಬಹುದಾದರೂ, ಧರ್ಮ ಮತ್ತು ಸಂಸ್ಕೃತಿ ರಕ್ಷಣೆಯ ಹೊಣೆ, ಸಮಾಜ ಮತ್ತು ರಾಜ್ಯದಮೇಲೂ ಅಷ್ಟೇ ಇದೆ ಎಂಬುದನ್ನು ಮರೆಯಲಾಗದು. ರಾಜ್ಯದ ಅನುಕೂಲ ಆಶ್ರಯಗಳು ಸಮಾಜಕ್ಕೆಷ್ಟು ಮುಖ್ಯವೋ ಮಠಗಳಿಗೂ ಅಷ್ಟೇ ಮುಖ್ಯವಾದುದಾಗಿದೆ.

ಆದರೆ ಇಂದು ಮಠ, ಸಮಾಜ, ರಾಜ್ಯ ಇವು ಮೂರೂ ಪರಸ್ಪರ ಸಹಕಾರ ಭಾವನೆಯಿಂದ ವರ್ತಿಸುವುದಕ್ಕೆ ಬದಲು ಕುತರ್ಕ, ಟೀಕೆ, ದೋಷಾ ರೋಪಣೆಗಳಲ್ಲೇ ಕಾಲಕಳೆಯುತ್ತಿವೆ. ಇದು ನಿಜವಾಗಿ ಮಂಗಲಕರ ಲಕ್ಷಣವಲ್ಲ. ವಿಶೇಷತಃ ಈಗ ಧರ್ಮದ ಬಗ್ಗೆ ಔದಾಸೀನ್ಯ ಬುದ್ಧಿ ಬೆಳೆಯುತ್ತಲಿದೆ ಎಂಬುದು, ನಮ್ಮ ಭವಿತವ್ಯವು ದುರ್ದೈವದ ಮಡುವಿನಲ್ಲಿ ಬೀಳುವುದೆಂಬುದರ ಸೂಚನೆ. ಇಂದು ನಮಗೆ ಧರ್ಮ, ಮತ, ಸಂಪ್ರದಾಯಗಳೆಂಬುದು ಬಹುದೊಡ್ಡ ತೊಡಕಿನ ಸಮಸ್ಯೆಯಾಗಿ ಕುಳಿತಿದೆ. ದಿನೇ ದಿನೇ ಈ ಸಮಸ್ಯೆಯು ಹೆಚ್ಚು ತೊಡಕಾಗುತ್ತಾ ನಡೆದಿದೆ. ಈ ಸಮಸ್ಯಾ ಪೂರ್ತಿಯಾಗಿ, ಲೋಕವು ಸುಖಮುಖವಾಗಬೇಕಾದರೆ ಸಮಾಜ, ರಾಷ್ಟ್ರ ಮತ್ತು ಧರ್ಮ ಗುರುಗಳು ಪರಸ್ಪರ ಸಹಕಾರ ಮನೋವೃತ್ತಿ ಯಿಂದ ಕರ್ತವ್ಯೋನ್ಮುಖರಾಗಬೇಕಾದ್ದು ಅನಿವಾರ್ಯವೆಂದು ನಾನಿಲ್ಲಿ ಸೂಚಿಸ ಬಯಸುತ್ತೇನೆ.

ಇನ್ನು ಕೊನೆಯದಾಗಿ ಈ ಪುಸ್ತಕ ಬರೆಯಲು ನನ್ನನ್ನು ಪ್ರೇರಿಸಿ, ಅವಶ್ಯಕವಾದ ವಿಷಯಸಂಗ್ರಹಗಳನ್ನು ಒದಗಿಸಿಕೊಟ್ಟು, ಕೃಪಾದೃಷ್ಟಿಯಿಂದ ಪ್ರೋತ್ಸಾಹಿಸಿದ ಶ್ರೀಮದ್ರಾಮಚಂದ್ರಪುರ ಧರ್ಮಪೀಠಾಧೀಶರಾಗಿ ವಿರಾಜಿಸುತ್ತ ಲಿರುವ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರಿಗೆ ನನ್ನ ಕೃತಜ್ಞತಾ ಪೂರ್ವಕವಾದ ಅನಂತ ವಂದನೆಗಳನ್ನರ್ಪಿಸುತ್ತೇನೆ. ಈ ಕಾರ್ಯದಲ್ಲಿ ತಮ್ಮ

ಅನುಭವಾಮೃತವನ್ನುಣಿಸಿ, ನನಗೆ ಹೆಚ್ಚಿನಕಳಕಳಿತುಂಬಿದ ತೀರ್ಥಹಳ್ಳಿ ರಾಮಚಂದ್ರ ಪುರಮಠದ ಮುಖ್ಯಾಧಿಕಾರಿಗಳಾದ ಶ್ರೀಯುತ ಅನಂತಭಟ್ಟರನ್ನು ಹೃತ್ಪೂರ್ವಕ ವಂದಿಸದಿರಲಾರೆ.

ಸರ್ವಾಂತರ್ಯಾಮಿಯಾದ ಜಗದೀಶನು ಸರ್ವರಿಗೂ ಮಂಗಲಕರವಾದ ಬುದ್ಧಿಯನ್ನು ಪ್ರೇರಿಸಲಿ.

|| ಓಂ ತತ್ಸತ್. ||

ವಿಜಯ ಸಂ|| ರದ ಉತ್ಥಾನ ದ್ವಾದಶಿ,
ತಾ|| 18-11-1953.

ಇಂತು, ಸಾಧುಜನರ ಪಾದ ಧೂಲಿಯ
ಸೇವಕ,
ವೈದ್ಯ, ಗ. ಸು. ಪಾಟೀಲ, ಬರಿಗೆ.



॥ ಶ್ರೀ ॥



ಪ್ರಥಮ ಭಾಗ

# ಹವ್ಯಕ ಸಮಾಜದ ಇತಿಹಾಸ.

**ಪರಶುರಾಮನ ಭೂದಾನ.**

ಪೂರ್ವ ಕಾಲದಲ್ಲಿ ಭೂಮಂಡಲವೆಲ್ಲವೂ ದುಷ್ಟ ಕ್ಷತ್ರಿಯರಿಂದ ತುಂಬಿ ಎಲ್ಲೆಲ್ಲೂ ಅಧರ್ಮದ ಪ್ರಕೋಪವಾಗಿ ಮದ ಮಾತ್ಸರ್ಯಗಳಿಂದಲೂ, ವಿಲಾಸ, ವಿಹಾರಗಳಿಂದಲೂ ಕೊಬ್ಬಿದ ಅರಸರಿಂದ ಶಮದಮಾಯುತರಾದ ತಪೋನಿಷ್ಠ ಋಷಿ ಮುನಿಗಳ ನಿಷ್ಕಂಟಕ ತಪೋವೃತ್ತಿಗೆ ಅನುಕೂಲವಿಲ್ಲದಂತಾಯಿತು. ಇಂಥ ಗರ್ವಿತ ಚಕ್ರವರ್ತಿಗಳಲ್ಲೊಬ್ಬನಾದ ಕಾರ್ತವೀರ್ಯಾರ್ಜುನನಿಂದ ಅವಮಾನಹೊಂದಿದ; ಜಮದಗ್ನಿ ಕುಮಾರ ಶ್ರೀ ಪರಶುರಾಮನು ಹೇಹಯ ವಂಶವನ್ನು ಮೊದಲುಮಾಡಿಕೊಂಡು ೨೧ ಬಾರಿ ಕ್ಷತ್ರಿಯ ಕುಲವನ್ನೆ ನಾಶಪಡಿಸಿ, ಭೂಮಿಯನ್ನೆಲ್ಲಾ ಬ್ರಾಹ್ಮಣರಿಗೆ ದಾನಮಾಡಿಬಿಟ್ಟನು. ಭರತ ಖಂಡದ ಎಲ್ಲಾ ಪ್ರಾಂತಗಳಲ್ಲೂ ಬ್ರಾಹ್ಮಣ ವಸತಿಗೆ ಅನುಕೂಲಪಡಿಸಿಕೊಟ್ಟು, ಮಹೇಂದ್ರ ಪರ್ವತಕ್ಕೆ ನಡೆದನು.

ನಂತರ ಸಹ್ಯಾದ್ರಿಯಲ್ಲಿದ್ದ ಕೆಲವು ಬ್ರಾಹ್ಮಣರು ಪರಶುರಾಮನಲ್ಲಿಗೆ ಹೋಗಿ ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಪರಶುರಾಮನು ಸಹ್ಯಾದ್ರಿಯ ಪಶ್ಚಿಮಭಾಗದ ಪ್ರದೇಶವನ್ನು ವರುಣನಿಂದ ಬಿಡಿಸಿಕೊಟ್ಟು, ಕೇವಲ ಚಾಂಡಾಲ

ರಿಂದ ಆವೃತವಾದ ಈ ದಕ್ಷಿಣ ಪ್ರಾಂತ್ಯದಲ್ಲಿ ಶ್ರೇಷ್ಠರಾದ ಬ್ರಾಹ್ಮಣರು ಇಲ್ಲದಿರುವುದನ್ನು ನೋಡಿ ಆರ್ಯಾವರ್ತದಿಂದ ಶ್ರೇಷ್ಠರಾದ ವಿದ್ವಾನ್ ಬ್ರಾಹ್ಮಣರನ್ನು ಕರೆತಂದು, ಗೋಕರ್ಣದಿಂದ ಕನ್ಯಾಕುಮಾರಿಯ ವರೆಗೆ ೬೪ ಗ್ರಾಮಗಳಲ್ಲಿ ನಿಲ್ಲಿಸಿದನು.

ಕೇರಳರಾಜ್ಯವು ೫ ವಿಭಾಗಗಳಾಗಿ ವಿಂಗಡಿಸಲ್ಪಟ್ಟಿತು. (೧) ಗೋಕರ್ಣದಿಂದ ಸೀತಾನದಿಯವರೆಗೆ ಹೈವ ದೇಶ. (೨) ಸೀತಾನದಿಯಿಂದ ಪಯಸ್ವಾನಿಯವರೆಗೆ ತುಳುರಾಜ್ಯ. (೩) ಪಯಸ್ವಾನಿ ನದಿಯಿಂದ ಪುದುಪಟ್ಟಣದವರೆಗೆ ಕೂಪರಾಜ್ಯ. (೪) ಪುದುಪಟ್ಟಣ (ಪುದುಚೇರಿ) ದಿಂದ ಕನ್ನೇಟಿವರೆಗಿರುವುದೇ ಕೇರಳ ದೇಶ. (೫) ಕನ್ನೇಟಿಯಿಂದ ಕನ್ಯಾಕುಮಾರಿಯವರೆಗೆ ಮೂಶಿಕ ರಾಜ್ಯ. ನಂತರ ಹೈವದೇಶದ ೧೦ ಗ್ರಾಮಗಳಲ್ಲೂ, ತುಳುದೇಶದ ೧೬ ಗ್ರಾಮಗಳಲ್ಲೂ, ಕೂಪರಾಜ್ಯದ ೭ ಗ್ರಾಮಗಳಲ್ಲೂ, ಕೇರಳದೇಶದ ೧೮ ಗ್ರಾಮಗಳಲ್ಲೂ, ಮೂಶಿಕ ರಾಜ್ಯದ ೧೩ ಗ್ರಾಮಗಳಲ್ಲೂ ಅಂತೂ ಒಟ್ಟು ೬೪ ಗ್ರಾಮಗಳಲ್ಲಿ ಬ್ರಾಹ್ಮಣರನ್ನು ನಿಲ್ಲಿಸಿ, ಗೋಕರ್ಣದಿಂದ ಕನ್ಯಾಕುಮಾರಿಯವರೆಗೆ ಇರುವರಾಜ್ಯಕ್ಕೆ ತಿರುವಾಂಕೂರಿನ ಹತ್ತಿರ ಇರುವ ಪದ್ಮನಾಭಪುರವನ್ನೇ ರಾಜಧಾನಿಯನ್ನಾಗಿ ಮಾಡಿ ಭಾನುವಿಕ್ರಮನೆಂಬುವನನ್ನು ರಾಜನನ್ನಾಗಿ ಮಾಡಿದನು.

ಅನಂತರದಲ್ಲಿ ಪರಶುರಾಮನು ಎಲ್ಲ ಬ್ರಾಹ್ಮಣರನ್ನೂ ಕೂಡಿಸಿ ಹೇಳಿದ್ದೇನೆಂದರೆ " ಎಲೈ ಬ್ರಾಹ್ಮಣರುಗಳಿರಾ, ನಿಮಗೆ ಕಷ್ಟಬಂದ ಕಾಲದಲ್ಲಿ ನೀವೆಲ್ಲರೂ ಒಂದು ಕಡೆ ಒಟ್ಟುಗೂಡಿ ಪ್ರಾರ್ಥಿಸಿದರೆ ನಾನು ಬಂದು ನಿಮ್ಮ ಕಷ್ಟಗಳನ್ನು ನಿವಾರಣೆಮಾಡುತ್ತೇನೆ. ಇದು ನಾನು ನಿಮಗೆ ಕೊಟ್ಟ ವಚನವೆಂದು ತಿಳಿಯಿರಿ. " ಎಂದು ಆಶ್ವಾಸನವಿತ್ತು ಗೋಕರ್ಣಕ್ಕೆ ಹೊರಟು ಹೋದನು. ಸ್ವಲ್ಪಕಾಲದಮೇಲೆ ಸಂಶಯಾತ್ಮರಾದ ಈ ಬ್ರಾಹ್ಮಣರೆಲ್ಲರೂ ಪರಶುರಾಮನ ಮಾತನ್ನು ಪರೀಕ್ಷಿಸಲು ತ್ರಿಚ್ಚೂರಲ್ಲಿ ಕೂಡಿಕೊಂಡು ಒಮ್ಮನಸ್ಸಿನಿಂದ ಪರಶುರಾಮನನ್ನು ಪ್ರಾರ್ಥಿಸಲು ಪರಶುರಾಮನು ಬಂದು ನನ್ನಿಂದೇನಾಗಬೇಕೆಂದು ವಿಚಾರಿಸಲು, ಬ್ರಾಹ್ಮಣರು ಇನ್ನೇನು ಹೇಳಲೂ ಬಾರದೆ ಕೇವಲ ಪರೀಕ್ಷೆಗಾಗಿ ಕರೆದಿದ್ದೇಸರಿ ಎಂದರು. ಈ ಬ್ರಾಹ್ಮಣರ ಕ್ಷುದ್ರಬುದ್ಧಿಗೆ ಕುಪಿತನಾದ ಪರಶುರಾಮನು

ಶ್ಲೋಕ:- " ಕದನ್ನ ಭೋಜನಾಯೂಯಂ ಚೈಲಖಂಡಧರಾಭುವಿ।
ಅಪ್ರಶುದ್ಧಾಹ್ಯನಸ್ಥಾನಂ ವಾಹನೀಯೋ ಭವಿಷ್ಯಥ ॥ "

ಅಂದರೆ " ಅಪವಿತ್ರವಾದ ಭೋಜನ ಮತ್ತು ನಡವಳಿಕೆಗಳುಳ್ಳವರಾಗಿಯೂ, ತುಂಡುವಸ್ತ್ರಗಳನ್ನು ಧಾರಣೆಮಾಡುವವರಾಗಿಯೂ, ಒಗ್ಗಟ್ಟಿಲ್ಲದ ಚಂಚಲ

**ಮಯೂರವರ್ಮನ ಚರಿತ್ರೆ.**

ತನ್ನ ಪರಾಕ್ರಮದಿಂದ ಸೈನ್ಯಕೂಡಿಸಿ ಸುತ್ತಲಿನ ಪಲ್ಲವರಾಜರಿಂದ ಗಡಿ ರಾಜ್ಯಗಳನ್ನು ಕಿತ್ತುಕೊಂಡು ತ್ರಿಕೂಟಾಚಲದ ಹತ್ತಿರ ತನ್ನ ರಾಜ್ಯವನ್ನು ಸ್ಥಾಪಿಸಿ, ಕ್ಷತ್ರಿಯರಷ್ಟೇ ಶಕ್ತಿ ಬ್ರಾಹ್ಮಣರಿಗೂ, ಇದೆ ಎಂಬುದನ್ನು ತೋರಿಸಿದನು. ಕೊನೆಗೆ ಇವನೇ ಸೂರ್ಯವಂಶದ ಮಯೂರವರ್ಮನೆಂದು ಪ್ರಸಿದ್ಧನಾದನು.

ಮಯೂರವರ್ಮನ ರಾಜಧಾನಿಯಾದ ಜಯಂತೀಪಟ್ಟಣಕ್ಕೆ ಒಂದಾನೊಂದು ದಿನ ಕಶ್ಯಪನೆಂಬ ಬ್ರಾಹ್ಮಣೋತ್ತಮನು ಬಂದು ರಾಜೋಪಚಾರರಿಂದ ಸತ್ಕೃತನಾಗಿ ರಾಜನನ್ನು ಕುರಿತು ಹೀಗೆ ಹೇಳಿದನು. " ಎಲೈರಾಜನೇ, ಯಾವ ದೇಶದಲ್ಲಿ ಯಜ್ಞಯಾಗಾದಿಸತ್ಕರ್ಮಗಳೂ, ಸಾತ್ವಿಕ ಕರ್ಮಾನುಷ್ಠಾನ ನಿರತರಾದ ತಪಸ್ವೀಬ್ರಾಹ್ಮಣರೂ, ಯಜ್ಞಸಹಾಯಕಗಳಾದ ಗೋವುಗಳೂ, ಇರುವುದಿಲ್ಲವೋ ಆ ದೇಶವು ಅತ್ಯಂತ ನಿಂದ್ಯವಾಗಿದ್ದು, ರಾಜನಿಗೆ ಶ್ರೇಯಸ್ಸನ್ನು ಕೊಡಲಾರದು. ನಿನ್ನ ದೇಶದಲ್ಲಿ ಪರಶುರಾಮನ ಶಾಪದಿಂದ ಭ್ರಷ್ಟರಾದ ತೇಜೋಹೀನ ಬ್ರಾಹ್ಮಣರು, ಭಿಲ್ಲರು, ಕೊರಚರು, ಚಾಂಡಾಲರು, ವೇದನಿಂದಕರಾದ ಜೈನ ಬೌದ್ಧಾದಿಗಳು ತುಂಬಿದ್ದಾರೆ. ರಾಷ್ಟ್ರಪಾಲಕನಾದ ರಾಜನಿಗೆ ತಿಳಿದೋ ತಿಳಿಯದೆಯೋ ಅನೇಕಪಾಪಗಳು ಘಟಿಸುತ್ತವೆ. ಪ್ರಜೆಗಳಿಂದ ನಡೆಯುವ ಪುಣ್ಯಪಾಪಗಳಲ್ಲಿ ಕೆಲವಂಶಕ್ಕೆ ರಾಜನೂ ಭಾಗಿಯಾಗುತ್ತಾನೆ. ಇವುಗಳ ನಿವಾರಣಾರ್ಥವಾಗಿಯೂ, ಲೋಕಕ್ಷೇಮ ನಿಮಿತ್ತವಾಗಿಯೂ, ರಾಜನು ಯಜ್ಞಯಾಗಾದಿ ಸತ್ಕರ್ಮಗಳಿಂದ ದಿವ್ಯಶಕ್ತಿಗಳನ್ನು ಆರಾಧಿಸುತ್ತಿರಬೇಕು. ಪೂರ್ವ ಪುಣ್ಯವಶಾತ್ ದೊರಕಿರುವ ರಾಜ ವೈಭವಗಳಲ್ಲಿ ಮೈಮರೆತು ಕೇವಲ ಭೋಗನಿರತನೂ, ದುಷ್ಟಶಕ್ತಿಗಳನ್ನು ದಮನಮಾಡಲಸಮರ್ಥನೂ, ಭೌತಿಕ ವಾದಿಯೂ ಆಗಿದ್ದರೆ, ಈ ಜಡ ಜಗತ್ತಿಗೆ ಚೈತನ್ಯವನ್ನು ನೀಡುವ ದಿವ್ಯ ಶಕ್ತಿಗಳು ಕುಪಿತವಾಗಿ ರಾಜನಿಗೆ ನರಕ ಪ್ರಾಪ್ತಿಯಾಗುವುದು " ಎಂದನು.

ತಪೋಧನನಾದ ಕಶ್ಯಪ ಬ್ರಾಹ್ಮಣನ ಈ ಮಾತನ್ನು ಕೇಳಿ ವಿಚಾರ ಶೀಲನಾದ ಮಯೂರವರ್ಮನು ಚಿಂತಾಕ್ರಾಂತನಾಗಿ ಆ ಮುನಿಯಪಾದಕ್ಕೆರಗಿ ವಿನಯದಿಂದ ಪ್ರಶ್ನೆ ಮಾಡಿದನು. " ಸ್ವಾಮೀ, ತಾತ್ವಿಕ ವಿವೇಚನಾಪೂರ್ಣವಾದ ಮಾತಿನಿಂದ ನನ್ನ ಅಜ್ಞಾನವು ದೂರವಾಯಿತು. ನಿಮ್ಮ ಹೇಳಿಕೆಯು ಸರ್ವಥಾ ಸತ್ಯಪೂರ್ಣವಾದುದೆಂದು ನನ್ನ ಅಂತಃಕರಣವು ಒಪ್ಪುತ್ತದೆ. ಆದರೆ ಅದಕ್ಕೀಗ ಮಾಡುವುದೇನು? ಶಾಪಗ್ರಸ್ತರೂ ಭ್ರಷ್ಟವಾದ ಕರ್ಮಾಚಾರವುಳ್ಳವರೂ, ವೇದಬಾಹಿರರೂ ಆದ ಈ ಬ್ರಾಹ್ಮಣರಿಂದ ನೀವುಹೇಳಿದಂತೆ

ಯಜ್ಞಯಾಗಾದಿ ಸತ್ಕಾರ್ಯಗಳು ನಡೆಯಲಾರವು. ಈಗ ನನ್ನ ಉದ್ಧಾರಕ್ಕೆ ಉಪಾಯವೇನು ? ದಯಾಮಯರಾದ ನೀವೇ ಈ ದೀನನನ್ನು ಉದ್ಧರಿಸಬೇಕು. ತಮ್ಮ ಆಜ್ಞೆಯಂತೆ ನಡೆಯಲು ಸದಾ ಸಿದ್ಧನಿದ್ದೇನೆ " ಎಂದನು.

ರಾಜನ ಈ ಮಾತನ್ನು ಕೇಳಿ ಆ ಬ್ರಾಹ್ಮಣನು " ಹೇ ರಾಜ, ನೀನು ನಿನಗೂ ನಿನ್ನ ದೇಶಕ್ಕೂ ಕಲ್ಯಾಣ ಬಯಸುವುದಾದರೆ, ಈಗಲೇ ಮೇರು ಪರ್ವತದ ದಕ್ಷಿಣಭಾಗದಲ್ಲಿರುವ ಅಹಿಚ್ಛತ್ರವೆಂಬ ಸ್ಥಾನಕ್ಕೆ ಹೋಗಿ, ಅಲ್ಲಿರುವ ಬ್ರಾಹ್ಮಣರನ್ನು ಕರೆದುಕೊಂಡು ಬಾ. ಅವರು ವೇದ ವೇದಾಂಗ ಪಾರಂಗತರೂ, ಯಜ್ಞಪ್ರಯೋಗ ಕುಶಲರೂ ಆಗಿದ್ದಾರೆ. ಅವರಿಂದ ನಿನ್ನ ನ್ಯೂನತೆಯು ದೂರವಾಗುವುದು " ಎಂದು ಹೊರಟುಹೋದನು.

ರಾಜನು ಆಗಲೇ ತಕ್ಕಷ್ಟು ಸೈನ್ಯೋಪಕರಣಗಳೊಡನೆ ಹೊರಟು ಅನೇಕ ನದೀ-ನದಗಳನ್ನೂ, ಗಿರಿ-ಕಂದರಗಳನ್ನೂ, ಅರಣ್ಯ ಕ್ಷೇತ್ರಗಳನ್ನೂ, ದಾಟುತ್ತ, ಕೆಲವು ದಿನಗಳಲ್ಲೇ ಅಹಿಚ್ಛತ್ರ ಕ್ಷೇತ್ರವನ್ನು ತಲುಪಿದನು. ಅಲ್ಲಿ ಪಟ್ಟಣದ ಹೊರಗಡೆ ತನ್ನ ಡೇರೆಯನ್ನು ಹಾಕಿ ಆ ಶ್ರೇಷ್ಠರಾದ ಬ್ರಾಹ್ಮಣರನ್ನು ಒಲಿಸಲು ಒಂದು ಉಪಾಯವನ್ನು ಮಾಡಿದನು. ಏನೆಂದರೆ,- ನಿತ್ಯವೂ ಓರ್ವ ಬ್ರಾಹ್ಮಣ ಪ್ರಮುಖನ ಮನೆಯ ಬಾಗಿಲಿಗೆ ಅರ್ಧರಾತ್ರಾನಂತರದಲ್ಲಿ ಹೋಗಿ ಬಹಿದ್ವಾರದ ಹೊಸ್ತಿಲಿನಮೇಲೆ ಒಂದೊಂದು ಸುವರ್ಣದ ನಾಣ್ಯವನ್ನು ಇಡುತ್ತಾ ಬಂದನು. ಪ್ರತಿದಿನವೂ ಹೀಗೆ ಮನೆಯ ಹೊಸ್ತಿಲಿನಮೇಲೆ ಸುವರ್ಣದ ನಾಣ್ಯವಿರುತ್ತಿದ್ದುದನ್ನು ಕಂಡು ಬ್ರಾಹ್ಮಣನು ಚಕಿತನಾಗಿ ಉದ್ದೇಶ್ಯಪೂರ್ವಕವಾದ ಈ ಕಾರ್ಯದಲ್ಲೇನೋ ರಹಸ್ಯವಿದೆಯೆಂದು ತಿಳಿದು, ಈ ವಿಷಯವನ್ನು ಪರೀಕ್ಷಿಸಿ ಕಂಡುಹಿಡಿಯಬೇಕೆಂದು ಒಂದುದಿನ ರಾತ್ರಿ ಕಾದು ಕುಳಿತನು. ೪ ನೇ ಯಾಮದಲ್ಲಿ ನಾಣ್ಯವನ್ನಿಡಲು ಬಂದ ಮಯೂರವರ್ಮನನ್ನು ಕಂಡು ಬ್ರಾಹ್ಮಣನು ಕೇಳಿದಾಗ ರಾಜನು ಆ ಬ್ರಾಹ್ಮಣನಿಗೆ ನಮಸ್ಕರಿಸಿ, ವಿನಯದಿಂದ " ಎಲೈ ಮಹಾನುಭಾವರೆ, ನಾನು ಗೋರಾಷ್ಟ್ರ ದೇಶದ ರಾಜನು. ಗೋಕರ್ಣದಿಂದ ಪಯಸ್ವಾನಿ ನದಿಯವರೆಗಿರುವ ನನ್ನ ರಾಜ್ಯದಲ್ಲಿ ಪರಶುರಾಮನಿಂದ ಪ್ರತಿಷ್ಠಿತರಾದ ಬಾಹ್ಮಣರು ಶಾಪಗ್ರಸ್ತರಾಗಿ ವಿದ್ಯಾಹೀನರೂ, ಕರ್ಮಭ್ರಷ್ಟರೂ, ಆದ್ದರಿಂದ ಯಜ್ಞಯಾಗಾದಿಗಳನ್ನು ಮಾಡಲು ಅಯೋಗ್ಯರಾಗಿದ್ದಾರೆ. ಹೀಗೆ ನನ್ನ ರಾಜ್ಯವು ಸಾಧುಪುರುಷರಿಂದ ಸೇವಿಸಲು ಅನರ್ಹವಾಗಿ, ನಾನೂ ಸಹ ತೇಜೋಹೀನನಾಗುತ್ತಿದ್ದೇನೆ. ಆದ್ದರಿಂದ ತಾವುಗಳು ಕೃಪೆಮಾಡಿ ಕುಟುಂಬಸಮೇತರಾಗಿ ನನ್ನ ದೇಶಕ್ಕೆ ದಯಮಾಡಿಸಿ, ಯಜ್ಞಯಾಗಾದಿಗಳನ್ನಾಚರಿಸಿ, ನನ್ನ ಕುಲ

ವನ್ನೂ, ದೇಶವನ್ನೂ ಉದ್ಧರಿಸಬೇಕು " ಎಂದು " ಸುಬೋಧ " ನೆಂಬ ಆ ಬ್ರಾಹ್ಮಣನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ದಯಾರ್ದ್ರ ಹೃದಯನಾದ ಆ ಬ್ರಾಹ್ಮಣ ಶ್ರೇಷ್ಠನು ತನ್ನ ಊರಿನಿಂದ ಮೂವತ್ತೆರಡು ಬ್ರಾಹ್ಮಣ ಕುಟುಂಬಗಳನ್ನು ಹೆಂಡಿರು ಮಕ್ಕಳು ಸಹಿತವಾಗಿ ಮಯೂರವರ್ಮನೊಡನೆ ಕಳಿಸಿಕೊಟ್ಟನು.

ರಾಜಾ ಮಯೂರವರ್ಮನು ಅವರನ್ನು ತನ್ನ ದೇಶಕ್ಕೆ ಕರೆತಂದು ಯಜ್ಞಯಾಗಾದಿಗಳನ್ನು ಮಾಡಿಸಿ, ಅವರಿಗೆ ಸಮೃದ್ಧಿಯಾಗಿ ದಕ್ಷಿಣೆಗಳನ್ನು ಕೊಟ್ಟು ಸಂತೋಷಪಡಿಸಿ, ತನ್ನ ದೇಶದಲ್ಲಿ ನೆಲೆಯಾಗಿ ನಿಲ್ಲಲೋಸುಗ, ಕಾಣಂ-ದೂರು, ಕೇರಳೂರು, ನೇಳುಮತ್ತಿ, ತೇಳವಳ್ಳಿ, ಕೂವಳೂರು, ಸನ್ನಿ, ಸಾಲೂರು, ಬಂದೂರು, ಕಾಸಿಹಾಲ, ವರಿತ್ತೂರು, ಜಂಬು, ಖಂಡಿಕ, ಸಹಸಿ, ಕುಂದಗೋಳ, ಭಲಾಸಾ, ಗೌಜ, ಕಣ್ಣೂರು, ತ್ರೈಗರ್ತ, ( ತಾಗರ್ತಿ ) ಈ ಹದಿನೆಂಟು ಗ್ರಾಮಗಳನ್ನು ಈ ಬ್ರಾಹ್ಮಣರಿಗೆ ಉಂಬಳಿಯಾಗಿ ಕೊಟ್ಟನು. ಮತ್ತು ಕಂದತಾಕಾನನದಲ್ಲಿ ಮೂರು ಕುಟುಂಬಗಳು, ಗೋಕರ್ಣದಲ್ಲಿ ನಾಲ್ಕು, ಶುಕ್ತಿಮತಿ ನದೀತೀರದಲ್ಲಿ ಎರಡು, ಸೀತಾನದೀತೀರದ ಗಜಪುರಿಯಲ್ಲಿ ಎರಡು, ಅಜಪುರಿಯಲ್ಲಿ ಎರಡು ಕುಟುಂಬಗಳು, ಉಡುಪಿಯ ಹತ್ತಿರ ಹತ್ತು, ನೇತ್ರಾವತಿಯ ಉತ್ತರ ತೀರದಲ್ಲಿ ಒಂಭತ್ತು, ಈರೀತಿಯಾಗಿ ಮೂವತ್ತೆರಡು ಕುಟುಂಬಗಳನ್ನು ನಿಲ್ಲಿಸಿದನು. ಇವರಿಗೆ ಯಾವ ವಿಧವಾದ ಕೊರತೆಯೂ ಉಂಟಾಗದಂತೆ ಬಹಳ ಮುತುವರ್ಜಿಯಿಂದ ರಕ್ಷಣೆಮಾಡುತ್ತ ಬರುತ್ತಿದ್ದನು.

ಮಯೂರವರ್ಮನ ಮರಣಾನಂತರ ಅವನ ಮಗನಾದ ತ್ರಿನೇತ್ರ ಕದಂಬ ( ಕಂಗುವರ್ಮ ) ನಲ್ಲಿ ಅವನ ಮಿತ್ರನಾದ ಚಂಡಸೇನ ರಾಜನು ತನ್ನ ರಾಜ್ಯಕ್ಕೂ ಈ ಬ್ರಾಹ್ಮಣರ ಕೆಲವು ಕುಟುಂಬಗಳನ್ನು ತೆಗೆದುಕೊಂಡುಹೋಗಿ ಸ್ಥಾಪನೆ ಮಾಡಿದನು. ಮತ್ತು ತ್ರಿನೇತ್ರ ಕದಂಬನು ತನ್ನ ತಂಗಿಯನ್ನು ಚಂಡಸೇನನ ಪುತ್ರನಾದ ಲೋಕಾದಿತ್ಯನಿಗೆ ಕೊಟ್ಟು ವಿವಾಹ ಮಾಡಿದನು.

ಚಂಡಸೇನನ ಮರಣಾನಂತರ ಅವನ ರಾಜ್ಯದಲ್ಲಿದ್ದ " ಹುಬ್ಬಾಸಿಕ " ನೆಂಬ ಚಾಂಡಾಲನು ಹಲವುಜನ ಪುಂಡರನ್ನು ಸೇರಿಸಿ, ಸೈನ್ಯ ಕಟ್ಟಿಕೊಂಡು ಆ ಬ್ರಾಹ್ಮಣರನ್ನು ದ್ರವ್ಯಲೋಭದಿಂದ ಮಾರ್ಗಗಳಲ್ಲಿ ತಡೆದು ನಾನಾವಿಧವಾಗಿ ಹಿಂಸಿಸಿ, ಅನೇಕರನ್ನು ಕೊಲೆಮಾಡಿದನು. ಈರೀತಿಯಾಗಿ ಆ ಚಾಂಡಾಲನಿಂದ

ಪೀಡಿಸಲ್ಪಟ್ಟ ಬ್ರಾಹ್ಮಣರೆಲ್ಲರೂ ಸ್ವದೇಶಕ್ಕೆ ಓಡಿಹೋದರು. ನಂತರ ಪರಾಶರ ನೆಂಬ ಬ್ರಾಹ್ಮಣನಿಂದ ಪ್ರೇರಿತನಾದ ಚಂಡಸೇನನ ಪುತ್ರ ಲೋಕಾದಿತ್ಯನು ತನ್ನ ತಂದೆಯಿಂದ ತರಲ್ಪಟ್ಟ ಬ್ರಾಹ್ಮಣರೆಲ್ಲರೂ ಈರೀತಿಯಾಗಿ ಸ್ವದೇಶಕ್ಕೆ ಓಡಿಹೋದುದನ್ನು ಸಹಿಸಲಾರದೆ ಆ ಬ್ರಾಹ್ಮಣರ ಸ್ವದೇಶಕ್ಕೆ ತಾನೇಹೋಗಿ ಅಲ್ಲಿನ ಬ್ರಾಹ್ಮಣ ಪ್ರಮುಖನಾದ "ಭಟ್ಟಾಚಾರ್ಯ" ನೆಂಬುವನನ್ನು ಕಂಡು ಹಲವು ವಿಧದಿಂದ ಸ್ತೋತ್ರಮಾಡಿ ನಾನಾವಿಧವಾಗಿ ಧೈರ್ಯಹೇಳಿ ಭರವಸೆ ಕೊಟ್ಟು ಪುನಃ ತನ್ನ ದೇಶಕ್ಕೆ ಆ ಬ್ರಾಹ್ಮಣರನ್ನು ಕರೆತಂದನು. ಮತ್ತು ಚಾಂಡಾಲ ರಾಜನಾದ ಹುಬ್ಬಾಸಿಕನನ್ನು ಅವನ ಸೈನ್ಯ ಸಮೇತವಾಗಿ ನಾಶ ಪಡಿಸಿದನು. ಹೀಗೆ ಹುಬ್ಬಾಸಿಕನು ಮೃತಪಟ್ಟನಂತರ ಭೀತರಾದ ಕೆಲವು ಚಾಂಡಾಲರು ಸಿಕ್ಕಾಪಟ್ಟೆಯಾಗಿ ಓಡಿಹೋದರು; ಕೆಲವರು ವಿಧೇಯರಾಗಿ ಬ್ರಾಹ್ಮಣರ ರಕ್ಷಕರಾಗಿ ಉಳಿದರು.

ಸಹ್ಯಪರ್ವತ ( ಪಶ್ಚಿಮ ಘಟ್ಟ ) ದ ಪಶ್ಚಿಮದಲ್ಲಿ ಪಶ್ಚಿಮಕ್ಕೆ ಪಶ್ಚಿಮ ಸಮುದ್ರ, ( ಅರಬೀ ಸಮುದ್ರ ) ಉತ್ತರಕ್ಕೆ ಗೋಕರ್ಣದ ಸಮೀಪದಲ್ಲಿರುವ ಗಂಗಾವಳೀನದಿ, ದಕ್ಷಿಣಕ್ಕೆ ಕುಂದಾಪುರದ ಸಮೀಪದಲ್ಲಿರುವ ಗಂಗಾವಳೀ ನದಿ ಈ ನಾಲ್ಕು ಗಡಿಗಳ ಮಧ್ಯಪ್ರದೇಶದಲ್ಲಿ ಹದಿನಾರು ಗ್ರಾಮಗಳನ್ನು ಕಲ್ಪಿಸಿ, ಅಲ್ಲಿ ಅವರನ್ನು ಸ್ಥಾಪಿಸಿ ಭೂಮಿಯನ್ನು ಉಂಬಳಿ ಬಿಟ್ಟು ಬೇಸಾಯಕ್ಕೆ ಜನ ರನ್ನೂ, ಇತರ ಸೇವಕರನ್ನೂ ಕೊಟ್ಟನು. ಲೋಕಾದಿತ್ಯನು ಆ ಬ್ರಾಹ್ಮಣರಿಗೆ ೧೦ ಪಟ್ಟಣಗಳಿಂದ ಕೂಡಿದ ೧೬ ಗ್ರಾಮಗಳನ್ನೂ, ೧೦ ಘಟ್ಟಗಳನ್ನೂ, ಹತ್ತು ದುರ್ಗಾ ಸ್ಥಾನಗಳನ್ನೂ, ಐದು ಶೈವಕ್ಷೇತ್ರಗಳನ್ನೂ ಕೊಟ್ಟಿದ್ದನು.

ಕರ್ಮಕಾಂಡಗಳಲ್ಲಿ ಮಹಾ ಪ್ರವೀಣರಾದ ಈ ಬ್ರಾಹ್ಮಣರು ಭಟ್ಟಾ ಚಾರ್ಯನೆಂಬ ಬ್ರಾಹ್ಮಣ ಪ್ರಮುಖನ ಸಲಹೆಯಂತೆ ಗೋಕರ್ಣದಿಂದ ದಕ್ಷಿಣ ಭಾಗದಲ್ಲಿ ಬಹಳವಾಗಿ ಯಜ್ಞಗಳನ್ನು ಮಾಡಿದರು. ಗೋವುಗಳಿಂದ ಸಮೃದ್ಧ ವಾದ ಈ ದೇಶದಲ್ಲಿ ನಿರಂತರವೂ ಹವಿಸ್ಸುಗಳಿಂದ ದೇವತೆಗಳಿಗಾಗಿ ಯಜ್ಞವು ಮಾಡಲ್ಪಡುತ್ತಿತ್ತು. ಗೋರಾಷ್ಟ್ರ ದೇಶದಲ್ಲಿ ವಾಸಿಸಿ, ನಿತ್ಯವೂ ದೇವತೆಗಳಿಗೆ ಹವಿರ್ಭಾಗವನ್ನು ಸಲ್ಲಿಸುತ್ತ ಈದೇಶದ ಎಲ್ಲ ದೇವ-ಪಿತೃಗಳ ಯಜ್ಞದಲ್ಲೂ ಹವ್ಯಕವ್ಯಾದಿಗಳಿಂದ ಪ್ರಾಮುಖ್ಯತೆ ಪಡೆದ ಈ ಬ್ರಾಹ್ಮಣರಿಗೇ "ಹವ್ಯಕ" ರೆಂತ ಅನ್ವರ್ಥನಾಮ ಉಂಟಾಯಿತು. ಇವರಿರುವ ದೇಶಕ್ಕೆ "ಹವ್ಯದೇಶ" ವೆಂತ ಪ್ರಸಿದ್ಧವಾಯಿತು. ಅಂದಿನ ಪ್ರಚಲಿತ ರಾಜಭಾಷೆಯಾದ ಕನ್ನಡದಲ್ಲಿ

ಈ " ಹವ್ಯಕ " ಶಬ್ದವು ಅಪಭ್ರಂಶ ಹೊಂದುತ್ತ " ಹವೀಕ " " ಹೈವ " " ಹೈಗ " ಇತ್ಯಾದಿ ರೂಪವನ್ನು ಪಡೆದು ಪ್ರಸಿದ್ಧವಾಯಿತು. ಗೋಕರ್ಣದಿಂದ ಸೀತಾನದಿಯವರೆಗೆ ಇರುವ ದೇಶಕ್ಕೆ ಹೈವದೇಶವೆಂದು ಕರೆಯುತ್ತಿದ್ದರು.

ಇವರ ಸಾಮಾಜಿಕ ರೀತಿನೀತಿಗಳು ಮತ್ತು ಧರ್ಮ ನಿರ್ಣಯ, ವೃತ್ತಿ ಕಲ್ಪನೆ ಮುಂತಾದುವುಗಳಲ್ಲಿ ರಾಜನು ಕೈಹಾಕುವಂತಿರಲಿಲ್ಲ. ಬ್ರಾಹ್ಮಣ ಪ್ರಮುಖನಾದ ಭಟ್ಟಾಚಾರ್ಯನ ಸಲಹೆ ಮತ್ತು ಸೂಚನೆಯಂತೆ ಲೋಕಾದಿತ್ಯನೇ ಇವರಿಗೆ ಅಧಿಕಾರಗಳನ್ನು ವಿಂಗಡಿಸಿ, ಸಂಕೇತನಾಮಗಳನ್ನು ಕೊಟ್ಟನು. ಸಭಾಹಿತ, ಮಧ್ಯಸ್ಥ, ಯಾಜೀ, ಅವಭೃಥ, ಭಟ್ಟ, ತಾಂತ್ರಿಕ, ಪ್ರಭು, ಇವೇ ಆ ಏಳು ಸಂಕೇತ ನಾಮಗಳು. ೧, ಸಭಾಹಿತ- ಇವನು ಸಭಾಮಧ್ಯದಲ್ಲಿ ಅಧ್ಯಕ್ಷನಾಗಿದ್ದು ಧರ್ಮಾಧರ್ಮಗಳ ವಿಚಾರಣೆ ನಡೆಸಿ, ನಿರ್ಣಯ ಹೇಳುವವನು. ( ಜಡ್ಜ ) ೨, ನ್ಯಾಯ ವಿಚಾರ ಸಮಯದಲ್ಲಿ ಮಧ್ಯಸ್ಥನಾಗಿ ನಿಂತು ವಿಷಯಗಳನ್ನು ಮಂಡಿಸುವವನು. ( ಲಾಯರ್ ) ೩. ಯಾವಾಗಲೂ ಯಜ್ಞ ದೀಕ್ಷಿತನಾಗಿರುವವನೇ " ಯಾಜೀ " ( ದೀಕ್ಷಿತ ) ೪. ಯಜ್ಞಾಂತಾವಭೃಥ ಸ್ನಾನಕರ್ತನೇ " ಅವಭೃಥ " ನು. ೫. ವೇದಶಾಸ್ತ್ರ ನಿಪುಣನಾಗಿ ಪೂರ್ವಾಪರ ಕರ್ಮಕಾಂಡ ಕುಶಲನೇ " ಭಟ್ಟ " ೬. ವೈದಿಕ ಆಗಮ ತಂತ್ರಗಳಲ್ಲಿ ಪ್ರವೀಣನೇ " ತಾಂತ್ರಿಕ " ನು. ೭. ಇವರೆಲ್ಲರಿಗೂ ಒಡೆಯನಾಗಿ ಇವರಿಗಿರುವ ಅನುಕೂಲ ಅನಾನುಕೂಲಗಳನ್ನು ತಿಳಿದು ಯೋಗ್ಯ ವ್ಯವಸ್ಥೆ ಮಾಡಿಡುವವನೇ " ಪ್ರಭು " ( ಹೆಗಡೆ. ) ಈ ರೀತಿಯಾಗಿ ಅವರವರ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗನುಸಾರವಾಗಿ ಅನ್ವರ್ಥ ನಾಮಗಳಿವೆ. ಇವೆಲ್ಲ ಅಧಿಕಾರಗಳು ಸಾಮಾನ್ಯವಾಗಿ ಆನುವಂಶಿಕವಾಗಿಯೇ ನಡೆದುಬರುತ್ತಿತ್ತು. ಆದ್ದರಿಂದ ಈಗಲೂ ಭಟ್ಟ, ಹೆಗಡೆ, ದೀಕ್ಷಿತ, ಸಭಾಹಿತ, ತಾಂತ್ರಿಕ ಈ ಐದು ಉಪನಾಮಗಳು ಪ್ರಚಲಿತವಾಗಿವೆ. ಅವರ ಕಾರ್ಯಗಳು ಮಾತ್ರ ಪ್ರಚಲಿತವಿಲ್ಲ. " ಭಟ್ಟ " ನ ಕೆಲಸವೊಂದು ಮಾತ್ರ ಈವೊತ್ತಿಗೂ ನಡೆಯುತ್ತಿದೆ.

**ಹವ್ಯಕರ ಸಾಮಾಜಿಕ ಆಡಳಿತಗಳು.**

ಈ ಹವ್ಯಕರಿಗೆ ಕಾಶ್ಯಪ, ವಾಸಿಷ್ಠ, ವಿಶ್ವಾಮಿತ್ರ, ಆಂಗೀರಸ, ಭಾರದ್ವಾಜ, ಗೌತಮ, ಜಮದಗ್ನಿ ಇವೇ ಸಪ್ತಗೋತ್ರಗಳು. ಸೂರ್ಯ, ವಿನಾಯಕ, ದುರ್ಗಾ, ಶಿವ, ವಿಷ್ಣು, ಯಜ್ಞನಾರಾಯಣ, ಮತ್ತು ಷಣ್ಮುಖ ಇವೇ ಸಪ್ತ ದೇವತೆಗಳು. ಹೇಮ, ಕುಂದೋರು, ಬೇಗಾರು, ಮೃಗನನ್ನಿ, ಆರ್ಯಾಶೃಂಗ,

ಪುನ್ನಾಗರ, ಮಹಿಷಗಿರಿ, ರಾಮಾಗ್ರ್ಯ, ಶೃಂಗಕ, ಕಾನಮಕ್ಕಿ, ಗಂಡಕವನ, ಈ ಹತ್ತು ದುರ್ಗಾಸ್ಥಾನಗಳು. ಈ ಹೆಸರುಗಳು ಈಗ ಮಲಿನವಾಗಿವೆ. ಗೋಕರ್ಣ, ಗುಣವಂತೆ, ಅಗ್ರಶೃಂಗ, ಯೇಣ, ಕಡುಬ ಇವು ಐದು ಶೈವ ಕ್ಷೇತ್ರಗಳು.

ಅಂತೂ ಕ್ರಿ. ಪೂರ್ವ ೨೦೦ ರರಲ್ಲಿದ್ದ ಮಯೂರವರ್ಮನ ಕಾಲದಲ್ಲಿ ದಕ್ಷಿಣದೇಶಕ್ಕೆ ಅಹಿಚ್ಛತ್ರದಿಂದ ಬಂದ ಹವ್ಯಕ ಬ್ರಾಹ್ಮಣರು ಕ್ರಿ. ಶಕಾರಂಭದ ಸುಮಾರಕ್ಕೆ ಲೋಕಾದಿತ್ಯನ ಕಾಲಕ್ಕೆ ಸ್ಥಿರವಾಗಿ ನೆಲೆಯೂರಿದರು. ಪಶ್ಚಿಮ ಘಟ್ಟದ ತಪ್ಪಲೇ ಇವರ ನೆಲೆವೀಡಾಯಿತು. ಆಗ ಕದಂಬ ರಾಜ್ಯದಲ್ಲಿ ಪ್ರಚಾರ ದಲ್ಲಿದ್ದ ಕನ್ನಡ ಭಾಷೆಯು ಇವರಿಗೆ ಸಂಪೂರ್ಣವಾಗಿ ಒಗ್ಗಿ ಮೈಯುಂಡಿತು. ಹೀಗೆ ವಂಶಾನುಕ್ರಮದಿಂದ ಹಳೆಗನ್ನಡವೇ ಇವರಿಗೆ ಮಾತೃಭಾಷೆಯಾಗಿ ಪರಿಣಮಿ ಸಿತು. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಈ ಷಟ್ಕರ್ಮಗಳಲ್ಲಿ ನಿರತರಾಗಿದ್ದು ಈ ದೇಶದ ವೇಷ, ಭಾಷೆ, ನಡೆನುಡಿಗಳನ್ನು ಮೈಗೂಡಿಸಿಕೊಂಡರು. ಆದರೆ, ಇವರನಾಮ, ಗೋತ್ರ-ಶಾಖಾದಿಗಳು ಪೂರ್ವ ದಂತೆಯೇ ಇದ್ದವು. ಇವರಲ್ಲಿ ಯಜುರ್ವೇದಿಗಳೇ ಬಹುಸಂಖ್ಯಾಕರಿದ್ದಾರೆ. ಋಕ್ಸಾಮ ಶಾಖೆಯವರ ಸಂಖ್ಯೆ ಕೊಂಚ ಕಡಿಮೆ ಇದೆ.

ಹವ್ಯಕರು ಮೊಟ್ಟಮೊದಲು ಪಶ್ಚಿಮಘಟ್ಟದ ಪಶ್ಚಿಮಭಾಗದಲ್ಲಿ ಸಮುದ್ರ ಕರಾವಳೀ ಪ್ರದೇಶದಲ್ಲೇ ಇದ್ದರು. ನಂತರ ಕ್ರಮೇಣ ಜನಸಂಖ್ಯೆ ಹೆಚ್ಚಿದಂತೆ ವಿಸ್ತರಿಸುತ್ತ ಈಗ ಸುಮಾರು ಒಂದು ಲಕ್ಷ ಜನಸಂಖ್ಯೆಯುಳ್ಳವರಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಪುತ್ತೂರು, ಕುಂದಾಪುರ, ಪಾಂಡೇಶ್ವರ, ಕಾಸರ ಗೋಡು ಪ್ರಾಂತಗಳಲ್ಲೂ, ಉತ್ತರಕನ್ನಡ ಜಿಲ್ಲೆಯ ಶಿರಸಿ, ಸಿದ್ದಾಪುರ, ಭರತನ ಹಳ್ಳಿ, ಯಲ್ಲಾಪುರ, ಕುಮಟಾ, ಹೊನ್ನಾವರ, ಕಾರವಾರ ಪ್ರಾಂತಗಳಲ್ಲೂ,

**ಈಗಿನ ಸ್ಥಿತಿ.**

ಘಟ್ಟದಮೇಲಿನ ಕೊಡಗು, ಮೈಸೂರು ಸೀಮೆಯಲ್ಲಿ ಸಾಗರ ಸೊರಬ, ನಗರ, ತೀರ್ಥಹಳ್ಳಿ ತಾಲ್ಲೂಕುಗಳಲ್ಲೂ, ಕಡೂರು ಡಿಸ್ಟ್ರಿಕ್ಟಿನ ಪಶ್ಚಿಮ ಭಾಗದಲ್ಲಿಯೂ ಹರಡಿಕೊಂಡಿದ್ದಾರೆ. ಅಂತೂ ಇವರ ವ್ಯಾಪನೆಯು ಪಶ್ಚಿಮಘಟ್ಟ ( ಕೊಡಚಾದ್ರಿ, ಬಾಬಾಬುಡ್ಡಗಿರಿ ) ಗಳ ಪೂರ್ವಪಶ್ಚಿಮ ಭಾಗಗಳಲ್ಲಿ ಗೋಕರ್ಣದ ಉತ್ತರ ಭಾಗದಿಂದ ಮಲೆಯಾಳದ ವರೆಗೆ ಇರುವ ಪ್ರದೇಶದಲ್ಲಿ ಹರಡಿಕೊಂಡಿರುವರು. ನಕಾಶೆಯಲ್ಲಿ ಈ ಪ್ರದೇಶ ವನ್ನು " ಹವ್ಯಕಮಂಡಲ " ವೆಂದು ಗುರ್ತಿಸಲಾಗಿದೆ.

ಇವರೆಲ್ಲರ ಮುಖ್ಯ ಕಸಬು ಅಡಿಕೆ ವ್ಯವಸಾಯ ಮತ್ತು ಪೌರೋಹಿತ್ಯ ಗಳು. ಅಡಿಕೆ ವ್ಯವಸಾಯದಲ್ಲಿ ಇವರು ವಿಶೇಷಜ್ಞರೆನ್ನುವುದರಲ್ಲಿ ಸಂಶಯವಿಲ್ಲ.

ಶೇಕಡಾ ೯೦ ರಷ್ಟು ಜನರು ಕೇವಲ ಅಡಿಕೆ ಬೇಸಾಯದಿಂದಲೇ ಜೀವನ ಸಾಗಿಸುತ್ತಿದ್ದಾರೆ. "ವ್ಯವಸಾಯದ ಇಲಾಖೆಯವರು ಅಡಿಕೆ ಬೇಸಾಯಗಾರರಿಗೆ ಕಲಿಸುವುದಕ್ಕಿಂತ ಅವರಿಂದ ಕಲಿತುಕೊಳ್ಳಬೇಕಾದ ವಿಷಯವೇ ಬಹಳವಿದೆ" ಎಂದು ಮೈಸೂರು ಸರ್ಕಾರದ ವ್ಯವಸಾಯದ ಇಲಾಖೆಯ ಡೈರೆಕ್ಟರಾಗಿದ್ದ ಸಿ. ಕೋಲ್ಮನ್ ಸಾಹೇಬರು ಅಪ್ಪಣೆಕೊಡಿಸಿದ್ದರು.

ಹವ್ಯಕರು ಕರ್ಮಕಾಂಡ ಪ್ರಯೋಗದಲ್ಲೂ ವಿಶೇಷ ಕುಶಲರು. ಪೌರೋಹಿತ್ಯದಿಂದ ಮತ್ತು ಇತರ ವ್ಯಾಪಾರ, ವೈದ್ಯ, ನೌಕರಿ ಮುಂತಾದವುಗಳಿಂದ ಜೀವನ ನಡೆಸುವವರು ಬಹಳ ಕಡಿಮೆ. ಒಟ್ಟಿನಲ್ಲಿ ಈ ಜನರ ಆರ್ಥಿಕ ಸ್ಥಿತಿಯು ಮಧ್ಯಮ ವರ್ಗದಲ್ಲಿದೆ.

ವಿಶೇಷತಃ ಪೌರೋಹಿತ್ಯ ಉಳ್ಳವರು ಮಾತ್ರ ವೇದಾಧ್ಯಯನ ಮಾಡುವರು. ಕಾಲೋಚಿತ ಪ್ರಯೋಗ, ಸಂಸ್ಕೃತಗಳ ಅಭ್ಯಾಸವು ಸಾಮಾನ್ಯವಾಗಿದೆ. ರಾಜಕೀಯ ವಿದ್ಯೆಗಳಲ್ಲಿ ಕೊಡಗು, ಮಂಗಳೂರು ಮತ್ತು ಹೊನ್ನಾವರ, ಕಾರವಾರ ಪ್ರಾಂತ್ಯದವರೇ ತಕ್ಕಷ್ಟು ಮುಂದುವರೆದಿದ್ದಾರೆನ್ನಬಹುದು. ಈ ಜನಾಂಗದಲ್ಲಿ ಸ್ತ್ರೀ ವಿದ್ಯಾಭ್ಯಾಸವು ಇತ್ತೀಚಿಗೆ ಪ್ರಚಾರಕ್ಕೆ ಬರತೊಡಗಿದೆ. ಅಂತೂ ಸುಮಾರು ನೂರಕ್ಕೆ ೫೧ ಅಕ್ಷರಸ್ತರೂ, ೧·೫ ವಿದ್ಯಾವಂತರೂ, ೪೭·೫ ವಿದ್ಯಾಹೀನರೂ ಇದ್ದಾರೆ.

ಚಿಕ್ಕ ಚಿಕ್ಕ ಹಳ್ಳಿಗಳಲ್ಲಿ ಬಿಡಿಬಿಡಿಯಾಗಿ ಹರಡಿಕೊಂಡಿರುವುದರಿಂದಲೂ ತೋಟದ ಕೃಷಿಯೇ ಪ್ರಧಾನ ಕಸುಬಾದ್ದರಿಂದಲೂ ಇವರಲ್ಲಿ ಸಾಂಘಿಕ ಶಕ್ತಿ ಕಡಿಮೆಯಾಗಿದೆ. ಏಕಾಂತಪ್ರಿಯತೆಯೇ ಹೆಚ್ಚು. ಇವರು ಒಳ್ಳೇ ಕುಶಾಗ್ರ ಬುದ್ಧಿಗಳು. ಆದರೂ ಒಳ್ಳೇ ವಿದ್ಯಾವಂತರ ಸಂಖ್ಯೆ ಕಡಿಮೆ ಇರುವುದರಿಂದಲೂ, ಪ್ರಾಚೀನ ವೈದಿಕ ವಿದ್ಯೆಯಮೇಲೆ ಅನಾದರ ಉಂಟಾಗಿ ಆಧುನಿಕ ವಿದ್ಯೆಯ ಮಬ್ಬಿಗೆ ಬಿದ್ದಿರುವುದರಿಂದಲೂ, ಅದರ ಯಥೇಷ್ಟ ಉಪಯೋಗವಾಗುತ್ತಾ ಇಲ್ಲ. ಅತಿಥಿ ಸತ್ಕಾರದಲ್ಲಿ ತುಂಬಾ ಶ್ರದ್ಧೆಯುಳ್ಳವರು. ಒಂದೊಂದು ವೇಳೆ ಇವರ ಈ ಸರಳ ಸ್ವಭಾವವು ಈ ಯುಗದಲ್ಲಿ ಭೋಳೇತನವಾಗಿ ಪರಿಣಮಿಸಿ ಅನೇಕ ಕಷ್ಟನಷ್ಟಗಳಿಗೆ ಗುರಿಯಾಗುವರು.

ಮಾವಿನಕಾಯಿಯಿಂದ ಉಪ್ಪಿನಕಾಯಿ, ಗೊಜ್ಜು ಮುಂತಾದ ಪದಾರ್ಥಗಳನ್ನು ರುಚಿಕಟ್ಟಾಗಿ ಮಾಡುವುದರಲ್ಲಿ ಇವತ್ತಿಗೂ ಇವರನ್ನು ಮೀರಿಸಿ

ದವರಿಲ್ಲ. ಹಳ್ಳಿಯ ಸಹಜ ಸರಳತ್ವವು ಇವರಲ್ಲಿದೆ; ಪರಸ್ಪರ ವೈಮನಸ್ಯವೂ ಇದೆ. ಈಚಿಗೆ ಆಧುನಿಕ ನವನಾಗರಿಕತೆಯ ಪರಿಣಾಮವೂ ಇವರ ಮೇಲೆ ಆಗಿದೆ. ಬೇರೆ ಬೇರೆ ಪ್ರಾಂತ್ಯದ ಭಾಷೆಗಳ ಸಂಸ್ಕಾರ ಕೆಲಮಟ್ಟಿಗೆ ಆಗಿದ್ದರೂ ವಸ್ತುತಃ ಇವರೆಲ್ಲರ ಭಾಷೆ ಹಳೆಗನ್ನಡವೇ ಸರಿ. ಈ ಸಮಾಜದಲ್ಲಿ ಹಲವು ಲೇಖಕರೂ, ಕವಿಗಳೂ, ಕಲಾವಿದರೂ, ಆಗಿದ್ದಾರೆ.

ಪರಮಯ್ಯನೆಂಬ ಕವಿಯು “ ತುರಂಗ ಭಾರತ ” ವನ್ನು ವಾರ್ಧಿಕ ಷಟ್ಪದಿಯಲ್ಲಿ ಬರೆದಿದ್ದಾನೆ. ಕಿಬ್ಬಚ್ಚಲ ಮಂಜಮ್ಮ, ಮಂಚಾಲೆ ದುರ್ಗಾಮ್ಮ ಮುಂತಾದ ಸ್ತ್ರೀ ಕವಿಗಳೂ ಆಗಿ ಹೋಗಿದ್ದಾರೆ. ಹಟ್ಟಂಗಡಿ ರಾಮಭಟ್ಟರೆಂಬು ವರು ತತ್ವಜ್ಞಾನಿಗಳೂ, ಕವಿಗಳೂ ಆಗಿದ್ದರು. ಮರಿಜೋಯ್ಸ, ಸೂರೀ ದೀಕ್ಷಿತ ವೆಂಕಟೇಶಸೂರಿ, ವೆಂಕಟರಮಣಶಾಸ್ತ್ರಿ, ವಾಸಿಷ್ಠಗಣಪತಿಶಾಸ್ತ್ರಿ ಮುಂತಾದವರು ಈ ಜನಾಂಗದ ಪ್ರಸಿದ್ಧ ವಿದ್ವಾಂಸರು. ಪ್ರಸಿದ್ಧಿಗೆ ಬಾರದ ಹಲವು ತತ್ವಜ್ಞಾನಿ ಗಳೂ, ಕವಿಗಳೂ, ಗ್ರಂಥಕರ್ತರೂ, ಕಲಾವಿದರೂ ಆಗಿಹೋಗಿದ್ದಾರೆ; ಈಗಲೂ ಇದ್ದಾರೆ.

ಇವರು ದ್ರಾವಿಡ ಪಂಗಡದ ಬ್ರಾಹ್ಮಣರಿದ್ದು; ಸ್ಮಾರ್ತ ಸಂಪ್ರದಾಯ ದವರಾಗಿರುತ್ತಾರೆ. ಇವರ ಕರ್ಮಕಾಂಡಗಳೆಲ್ಲವೂ ಭೋಧಾಯನ ಗೃಹ್ಯ ಸೂತ್ರದ ಪ್ರಕಾರ ನಡೆಯುವವು. ಶ್ರೀ ಮದ್ರಾಮಚಂದ್ರಪುರದ ಮಠಾಧಿಪತಿಗಳೇ ಈ ಸಮಾಜದ ಧರ್ಮಗುರುಗಳು. ಈ ಜನಾಂಗದ ಎಲ್ಲಾ ಧಾರ್ಮಿಕ ಹಾಗೂ, ಸಾಮಾಜಿಕ ನಿಯಮ ಸಂಬಂಧೀ ಆಡಳಿತಗಳೂ ಈ ಮಠದ ಅಧೀನವಾಗಿದೆ.

ರಣಪರಾಕ್ರಮ ೧ನೇ ಕೀರ್ತಿ ವರ್ಮನೆಂಬ ಬಾದಾಮಿಯ ಪಶ್ಚಿಮ ಚಾಲುಕ್ಯ ಅರಸನಿಂದ ಕ್ರಿ. ಶ. ೫೬೭-೫೯೧ ರಲ್ಲಿ ಬನವಾಸಿಯ ಕದಂಬ ಅರಸ ನಾಗಿದ್ದ ಹರಿವರ್ಮನೆಂಬುವನು ಸೋಲಿಸಲ್ಪಟ್ಟು ಅಧೀನ ರಾಜ್ಯವಾದಮೇಲೆ ಹವ್ಯಕರಿಗೆ ರಾಜಾಶ್ರಯವು ಕಡಿಮೆಯಾಗತೊಡಗಿತು. ಇಷ್ಟೊತ್ತಿಗಾಗಲೇ ಅಂದರೆ ಕ್ರಿ. ಶಕಾರಂಭದಲ್ಲೇ ದಕ್ಷಿಣ ದೇಶಕ್ಕೆ ವ್ಯಾಪಿಸಿದ ಜೈನಮತವು ಪ್ರಾಬಲ್ಯಗೊಳ್ಳು ತ್ತಿತ್ತು. ಹಲವು ರಾಜರುಗಳು ಜೈನಮತವನ್ನು ಸ್ವೀಕರಿಸಿದ್ದರು. ಇದು ಸರ್ವತೋಮುಖವಾಗಿ ವೈದಿಕ ಧರ್ಮದ ಅವನತಿಯಕಾಲವಾಗಿತ್ತು. ಸ್ವಭಾ ವತಃ ಉದಾಸೀನರೂ, ಧರ್ಮ ನಿಷ್ಠರೂ, ಆದ ಹವ್ಯಕ ಬ್ರಾಹ್ಮಣರಿಗೆ ಸುಮಾರು ಕ್ರಿ. ಶ. ೭ನೇ ಶತಮಾನದಲ್ಲಿ ಜೀವನ ನಿರ್ವಾಹವು ತುಂಬಾ ಕಠಿಣವಾಯಿತು. ನಿರಂತರವೂ ನಡೆಯುತ್ತಿದ್ದ ಯಜ್ಞಯಾಗಾದಿಗಳು ಲುಪ್ತವಾಗತೊಡಗಿದವು.

ಈ ಸಮಯದಲ್ಲಿ ಹವ್ಯಕ ಬ್ರಾಹ್ಮಣರು ಅಡಿಕೆ ತೋಟದ ವ್ಯವಸಾಯವನ್ನು ಅವಲಂಬಿಸಿಕೊಂಡರು. ಈ ಕಸಬಿನಲ್ಲಿ ನಿರಂತರವೂ ಕೆಲಸ ಮಾಡುತ್ತಿರಬೇಕಾಗಿಲ್ಲವಾದ್ದರಿಂದ ನಿತ್ಯ ಕರ್ಮಾನುಷ್ಠಾನಗಳಿಗೇನೂ ತೊಂದರೆ ಇರಲಿಲ್ಲ. ಎತ್ತು ಮುಂತಾದ ಜೀವಿಗಳ ಹಿಂಸೆಮಾಡಬೇಕಾದ ಅವಶ್ಯಕತೆ ಇಲ್ಲದ್ದರಿಂದ ಶಾಂತ ವೃತ್ತಿಯಾದ ಬಾಗಾಯ್ತು ವ್ಯವಸಾಯವೇ ಇವರಿಗೆ ಹೆಚ್ಚು ಹಿತಕರವೆನಿಸಿತು. ಹಳ್ಳಿಯ ಪ್ರಶಾಂತ ವಾತಾವರಣ, ಅರಣ್ಯಗಳ ನಡುವೆ ಇರುವ ಅಡಿಕೆ ಸೋಗೆಯ ಪರ್ಣಶಾಲೆ, ಬ್ರಾಹ್ಮಣ ಬ್ರಹ್ಮಚಾರಿಗಳ ವೇದಘೋಷ, ಬಾಳೆ, ತೆಂಗು, ಅಡಿಕೆ, ಇನ್ನಿತರ ಫಲಪುಷ್ಪಾದಿಗಳಿಂದ ರಮ್ಯವಾದ ಉಪವನ, ಇವುಗಳೆಲ್ಲವೂ ಪ್ರಾಚೀನ ಋಷ್ಯಾಶ್ರಮದಂತೆ ಕಂಗೊಳಿಸಿದವು. ಈಗಲೂ, ಈ ಜನಾಂಗದ ಶೇಕಡಾ ೯೯ ರಷ್ಟು ಜನರು ಹಳ್ಳಿಗಳಲ್ಲೇ ವಾಸವಾಗಿರುವರು. ಶ್ರೀ ಶಂಕರಾಚಾರ್ಯರಿಂದ ಗೋಕರ್ಣದಲ್ಲಿ ಮಠ ಸ್ಥಾಪನೆ ಆಗುವವರೆಗೂ, ಇವರ ಧಾರ್ಮಿಕ ಮತ್ತು ಸಾಮಾಜಿಕ ನಿಯಮ ವ್ಯವಸ್ಥೆಗಳೆಲ್ಲವೂ, ಹಿಂದೆ ವಿವರಿಸಿದ ಸಭಾಹಿತ, ಪ್ರಭು, ಭಟ್ಟ ಮುಂತಾದವರಿಂದಲೇ ನಡೆಯುತ್ತಿದ್ದವು.





ಚಂದ್ರಮೌಳೀಶ್ವರ ಮತ್ತು ತಪೋರಾಮಾದಿ ವಿಗ್ರಹಗಳು
ಸುವರ್ಣ ಪೀಠದಲ್ಲಿರುವುದು

॥ ಶ್ರೀಃ ॥



## ದ್ವಿತೀಯ ಭಾಗ

# ಹವ್ಯಕ ಗುರುಮಠದ ಇತಿಹಾಸ.

ಮಹಾ ಭಾರತದ ಯುದ್ಧಾನಂತರದಲ್ಲಿ ಜನಮೇಜಯ ಮತ್ತು ಯಾದವ ಕುಲದ ವಜ್ರನ ನಂತರ ಕ್ರಿ. ಪೂ. ೧೦–೧೨ ನೇ ಶತಮಾನದ ವರೆಗೆ ನಮ್ಮ ಭರತಖಂಡದ ಸ್ಥಿತಿ ಯಾವರೀತಿಯಲ್ಲಿತ್ತೆಂಬುದು ಸರಿಯಾಗಿ ತಿಳಿದು ಬಂದಿಲ್ಲ. ಅಂತೂ ಈ ಮಧ್ಯಕಾಲದಲ್ಲಿ ಅತಿ ಮಹತ್ವದ ಯಾವ ಆಂದೋಲನವೂ ನಡೆದಂತೆ ಕಂಡುಬರುವುದಿಲ್ಲ. ಮಹಾಭಾರತದ ಯುದ್ಧಾನಂತರ ಮಹಾ ಮಹಾ ಮಂತ್ರಾಸ್ತ್ರಗಳೂ, ಅದ್ಭುತ ಯೋಗ ಶಕ್ತಿಗಳೂ, ವಿಚಿತ್ರ ಸೃಷ್ಟಿಗಳೂ ಲುಪ್ತಪ್ರಾಯವಾದವೆಂದು ಹೇಳಬಹುದು. ಅವೆಲ್ಲವೂ ಗ್ರಂಥಸ್ಥವಾದವೇ ಹೊರತು ಬಳಕೆಯಲ್ಲಿ ಕಡಿಮೆಯಾಗತೊಡಗಿತು.

**ಶಂಕರಗುರುಗಳ ಅವತಾರ ಮತ್ತು ಗೋಕರ್ಣದಲ್ಲಿ ಮಠ ಸ್ಥಾಪನೆ.**

ಹಿಂದೂದೇಶವೆಲ್ಲವೂ ಸಣ್ಣ ಪುಟ್ಟ ಹಲವು ರಾಜರ, ಪಾಳೆಯಗಾರರ ವಶದಲ್ಲಿತ್ತು. ಸನಾತನ ವೈದಿಕ ಧರ್ಮವು ಅವನತಿಯ ದಾರಿ ಹಿಡಿದಿತ್ತು. ಇದೇ ಸಮಯದಲ್ಲಿ ಅಂದರೆ ಕ್ರಿ. ಪೂ. ೬ ನೇ ಶತಮಾನದಲ್ಲಿ ಬೌದ್ಧ ಮತ, ಜೈನಮತ, ನಾಥಸಂಪ್ರದಾಯಗಳು ಹುಟ್ಟಿಕೊಂಡವು. ಆದರೆ ಸುಮಾರು ಕ್ರಿ. ಶಕಾರಂಭದಲ್ಲಿ ಬ್ರಾಹ್ಮಣ ಮತವು ಸ್ವಲ್ಪ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ನಂತರ ಬೌದ್ಧ ಜೈನ ಮತಗಳಿಗೆ ರಾಜಾಶ್ರಯ ಹೆಚ್ಚುತ್ತ ಬಂದಿದ್ದರಿಂದ ವಿಶೇಷ ಉನ್ನತಿಯನ್ನೇರಿ ಬ್ರಾಹ್ಮಣ ಮತಕ್ಕೆ ಕಂಟಕ ಪ್ರಾಯವಾಗಿದ್ದವು. ಅಲ್ಲದೆ

ನಾಥ ಸಂಪ್ರದಾಯವೂ ಕೆಟ್ಟು ಕಾಪಾಲಿಕ ಮೊದಲಾದ ವಾಮಮಾರ್ಗೀಯ ಅನಾಚಾರಗಳು ತಲೆಯೆತ್ತಿದ್ದವು. ಇದೇ ಸಂದರ್ಭದಲ್ಲಿ ಬ್ರಾಹ್ಮಣ ಮತದ ಜೀರ್ಣೋದ್ಧಾರಕ್ಕಾಗಿಯೋ ಎನ್ನುವಂತೆ ಉತ್ತರದಲ್ಲಿ "ಮಂಡನಮಿಶ್ರ" "ಕುಮಾರಿಲಭಟ್ಟ" ಎಂಬಿಬ್ಬರು ಮಹಾ ಪಂಡಿತರೂ, ದಕ್ಷಿಣದಲ್ಲಿ "ಶಂಕರಾಚಾರ್ಯ" ರೂ ಅವತರಿಸಿದರು. ಈ ತ್ರಿಮೂರ್ತಿಗಳ ಅವಿಶ್ರಾಂತ ಪರಿಶ್ರಮದಿಂದಲೇ ವೈದಿಕ ಸನಾತನಧರ್ಮವು ಈವರೆಗೂ ಜೀವಂತ ಉಳಿದಿದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಜೈನ ಬೌದ್ಧ ಸಂಪ್ರದಾಯಗಳು ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ, ಅಲ್ಲಿ ಕ್ಷಪಣಕ - ಭಿಕ್ಷುಗಳನ್ನೂ, ನಾಥ ಸಂಪ್ರದಾಯಿಗಳು ಭೈರವೋಪಾಸಕರಾದ ಯೋಗಿಗಳನ್ನೂ ಸ್ಥಾಪಿಸಿ, ತಮ್ಮ ತಮ್ಮ ಮತಪ್ರಚಾರ ಮಾಡುತ್ತಿದ್ದರು. ಶಂಕರಾಚಾರ್ಯರು ಆಸೇತು ಹಿಮಾಚಲ ಪರ್ಯಂತವೂ ಸಂಚರಿಸಿ, ಅನೇಕ ಜೈನ-ಬೌದ್ಧ ಪಂಡಿತರುಗಳನ್ನು ವಾದದಲ್ಲಿ ಜಯಿಸಿ, ಅಗಾಧವಾದ ಪಾಂಡಿತ್ಯ ಪ್ರತಿಭೆ, ಯೋಗಬಲಗಳಿಂದ ದಿಗ್ವಿಜಯಮಾಡಿ, ದಕ್ಷಿಣಕ್ಕೆ ಶೃಂಗೇರಿ, ಪಶ್ಚಿಮಕ್ಕೆ ದ್ವಾರಕಾ, ಉತ್ತರಕ್ಕೆ ಬದರಿ, ಪೂರ್ವಕ್ಕೆ ಜಗನ್ನಾಥಪುರಿ ಹೀಗೆ ಚತುರ್ದಿಕ್ಕುಗಳಲ್ಲೂ ನಾಲ್ಕು ಪ್ರಧಾನವಾದ ಬ್ರಾಹ್ಮಣ ಮಠಗಳನ್ನು ಸ್ಥಾಪಿಸಿದರು.

ಸರ್ವಪ್ರಥಮದಲ್ಲಿ ಮಂಡನಮಿಶ್ರರಿಗೆ ಸನ್ಯಾಸಾಶ್ರಮಕೊಟ್ಟು, "ಸುರೇಶ್ವರಾಚಾರ್ಯ" ರೆಂಬ ಹೆಸರಿನಿಂದ ಶೃಂಗೇರಿಯಲ್ಲಿ ಸ್ಥಾಪಿಸಿದರು. ನಂತರ ಸುರೇಶ್ವರಾಚಾರ್ಯರು ತಮ್ಮ ಶಿಷ್ಯರಲ್ಲಿ ಜ್ಯೇಷ್ಠನೂ, ಶ್ರೇಷ್ಠನೂ ಆದ ವಿದ್ಯಾನಂದರಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟರು. ಸನ್ಯಾಸಧರ್ಮವು ಹೀಗೆ ಪರಂಪರಾಗತವಾಗಿ ನಡೆಯುತ್ತ ಬರಬೇಕೆಂಬುದೇ ಶಂಕರಾಚಾರ್ಯರ ಉದ್ದೇಶವಿತ್ತು. ತಮ್ಮ ಪ್ರಶಿಷ್ಯನಾದ ವಿದ್ಯಾನಂದನನ್ನು ಜೊತೆಯಲ್ಲಿ ಕರೆದುಕೊಂಡು ಆಚಾರ್ಯರು ಸಂಚಾರಕ್ಕೆ ಹೊರಟರು. ಕಾಂಚಿಗೆ ಹೋಗಿ ಅಲ್ಲಿ ಶ್ರೀಚಕ್ರೋದ್ಧರಣ ಮತ್ತು ಕಾಮಾಕ್ಷಿ ದೇವಿಯ ಸ್ಥಾಪನೆಮಾಡಿ, ಚಿದಂಬರಕ್ಕೆ ತೆರಳಿದರು. ಅಲ್ಲಿ ವಿಕೃತಸೌರಮತವನ್ನು ಖಂಡಿಸಿ, ರಾಮೇಶ್ವರಕ್ಕೆ ಹೋಗಿ ಭೈರವೀ ಮತವನ್ನೂ, ಗಜಪುರಿಗೆ ಹೋಗಿ ಗಾಣಾಪತ್ಯ ಮತವನ್ನೂ, ಅನಂತಶಯನದಲ್ಲಿ ವೈಷ್ಣವ ಮತವನ್ನೂ ಖಂಡಿಸಿ ಶುದ್ಧೀಕರಿಸಿದರು. ನಂತರ ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನನ್ನು ಪೂಜಿಸಿ, ಅಲ್ಲಿಂದ ಗೋಕರ್ಣಕ್ಕೆ ಬಂದರು. ಮಹಾಕ್ಷೇತ್ರವಾದ ಗೋಕರ್ಣದಲ್ಲಿ ಕೆಲವುಕಾಲವಿದ್ದು ಭದ್ರಕಾಳಿ, ಮಹಾಗಣಪತಿ, ಮಹಾಬಲೇಶ್ವರ, ಆದಿಗೋಕರ್ಣಲಿಂಗ, ಇವುಗಳನ್ನೆಲ್ಲಾ ವಿಧಿವತ್ತಾಗಿ ಅರ್ಚಿಸಿ.

ಸಂಚರಿಸುತ್ತಿರುವಾಗ ಅಗಸ್ತ್ಯರಿಂದ ಪೂಜಿತವಾದ ವರದೇಶ ಲಿಂಗದ ಹತ್ತಿರ ಅಗಸ್ತ್ಯ ಶಿಷ್ಯರಲ್ಲೊಬ್ಬರಾದ ವರದಮುನಿಗಳು ತಪೋನಿರತರಾಗಿದ್ದರು. ಶ್ರೀ ಶಂಕರಾಚಾರ್ಯರ ಪ್ರಖ್ಯಾತಿಯು ಈಗಾಗಲೇ ಆಸೇತು ಹಿಮಾಚಲಪರ್ಯಂತ ವ್ಯಾಪಿಸಿತ್ತು. ವರದಮುನಿಗಳೂ ಶ್ರೀಮದಾಚಾರ್ಯರ ಕೀರ್ತಿಯನ್ನು ಕೇಳಿದ್ದರು. ಮಹಾ ತೇಜಸ್ವಿಯಾದ ಈ ತರುಣ ಸನ್ಯಾಸಿಯನ್ನು ಕಂಡು ವರದಮುನಿಗಳು, ಪರಮಾನಂದಭರಿತರಾದರು. ಅವರೊಡನೆ ಕುಶಲ ಪ್ರಶ್ನೆಗಳಾದಬಳಿಕ ಪರಸ್ಪರ ವೇದಶಾಸ್ತ್ರಪರಿಪ್ಲುತವಾದ ಸಂಭಾಷಣೆ ನಡೆಸಿ, ಸಂತುಷ್ಟಾಂತರಂಗರಾಗಿ ವರದ ಮುನಿಗಳು ಶಂಕರಾಚಾರ್ಯರನ್ನು ಕುರಿತು, " ಪ್ರಿಯ ಶಂಕರಾಚಾರ್ಯ, ಈ ಕಲಿಯುಗದಲ್ಲಿ ಎಲ್ಲಕಡೆ ವ್ಯಾಪಿಸಿಕೊಂಡಿರುವ ಅನೇಕ ದುರ್ಮತಗಳನ್ನು ಖಂಡಿಸಿ, ವೇದಾರ್ಥಸಮ್ಮತವಾದ ಸನಾತನ ಧರ್ಮವನ್ನು ದೃಢವಾಗಿ ಸ್ಥಾಪಿಸಲು ಶಿವಾಂಶ ದಿಂದ ನೀನು ಅವತರಿಸಿದವನಾಗಿದ್ದೀಯೆ; ನನ್ನ ಗುರುಗಳಾದ ಅಗಸ್ತ್ಯರಿಂದ ಈ ಹಿಂದೇ ಆಜ್ಞಾಪಿತನಾಗಿ ನಾನು ಈವರೆಗೂ ನಿನ್ನ ನಿರೀಕ್ಷಣೆಯಲ್ಲಿದ್ದೆ. ಈಗ ನಾನು ಹಿಮಾಚಲಕ್ಕೆ ಹೋಗುವೆನು. ಈ ಭಯಂಕರವಾದ ಕಲಿಯುಗದಲ್ಲಿ ನಿರ್ಜನವೂ, ದುರ್ಗಮವೂ ಆದ ಹಿಮಾಲಯವೇ ತಪಸ್ಸಿಗೆ ಹೆಚ್ಚು ಅನುಕೂಲಪ್ರದೇಶ ವಾಗಿದೆ; ಅಗಸ್ತ್ಯಮುನಿಗಳಿಂದ ಪೂಜಿಸಲ್ಪಡುತ್ತಿದ್ದ ತಪೋರಾಮ, ಸೀತಾ, ಲಕ್ಷ್ಮಣ, ಹಾಗೂ ಪಟ್ಟಾಭಿರಾಮ, ಸೀತಾ, ಲಕ್ಷ್ಮಣರೆಂಬ ಈಆರು ವಿಗ್ರಹಗಳನ್ನು ನಾನು ಈತನಕ ಪೂಜೆಮಾಡುತ್ತ ಬಂದಿದ್ದೇನೆ. ಈ ವಿಗ್ರಹಗಳನ್ನು ಈಗ ನಿನಗೆ ಪ್ರೀತಿಯಿಂದ ಅರ್ಪಿಸುತ್ತೇನೆ. ಈ ಆರೂ ವಿಗ್ರಹಗಳ ಅರ್ಚನೆಯು ಅವಿಚ್ಛಿನ್ನ ವಾಗಿ ನಡೆದುಕೊಂಡು ಹೋಗುವಂತೆ ತಕ್ಕ ವ್ಯವಸ್ಥೆಮಾಡು. ನಿನ್ನ ಅವತಾರ ಕಾರ್ಯಗಳು ಯಶಸ್ವಿಯಾಗಲಿ " ಎಂದು ಹೇಳಿ ವಿಗ್ರಹಗಳನ್ನು ಶಂಕರಾ ಚಾರ್ಯರ ಕೈಗಿತ್ತು ಹಿಮಾಚಲಕ್ಕೆ ತೆರಳಿದರು.

ಶ್ರೀ ಶಂಕರಾಚಾರ್ಯರು ಆ ಸುಂದರ ವಿಗ್ರಹಗಳನ್ನು ತಮ್ಮ ಪ್ರಶಿಷ್ಯ ನಾದ ವಿದ್ಯಾನಂದನಿಗೆ ಕೊಟ್ಟುದಲ್ಲದೆ ಆಚಾರ್ಯರು ತಮ್ಮಲ್ಲಿದ್ದ ಅತ್ಯಮೌಲ್ಯ ವಾದ ಚಂದ್ರಮೌಳೀಶ್ವರನನ್ನೂ ಆತನ ಕಡೆಗೆ ಕೊಟ್ಟರು. ಮತ್ತು ಶತ ಶೃಂಗ ಪರ್ವತ ಶಿಖರದಲ್ಲಿರುವ " ಅಶೋಕ " ಎನ್ನುವ ಸ್ಥಳದಲ್ಲಿ ಮಠವನ್ನು ನಿರ್ಮಾಣಮಾಡಿ " ಎಲೈ ವಿದ್ಯಾನಂದ, ಇಲ್ಲಿ ನೀನು ಉಳಿದು ನಿತ್ಯವೂ ಮಹಾಬಲೇಶ್ವರನ ದರ್ಶನ ಮಾಡುತ್ತಾ ಈ ತಪೋರಾಮಾದಿವಿಗ್ರಹಗಳನ್ನೂ, ಚಂದ್ರಮೌಳೀಶ್ವರ ಲಿಂಗವನ್ನೂ, ಅರ್ಚಿಸುತ್ತಿರು. ಈ ಗೋಕರ್ಣ ಮಂಡಲ ದಲ್ಲಿರುವ ಎಲ್ಲಾ ದ್ರಾವಿಡ ಬ್ರಾಹ್ಮಣರ ಆಚಾರ ವಿಚಾರಗಳನ್ನು ನಿರೀಕ್ಷಿಸುತ್ತ ಶಿಷ್ಯ ಪರಂಪರೆಯನ್ನೂ, ಈ ಮಠಾಧಿಪತ್ಯವನ್ನೂ ಅವಿಚ್ಛಿನ್ನವಾಗಿ

ಸಾಗಿಸಿಕೊಂಡು ಹೋಗುವಂತಾಗಲಿ; ಇದರಿಂದ ಈ ವರದಮುನಿ ಪ್ರದತ್ತವಾದ ಮೂರ್ತಿಗಳ ಅವಿಚ್ಛಿನ್ನ ಆರಾಧನೆಯೊಂದಿಗೆ ಸನಾತನ ವೈದಿಕ ಧರ್ಮದ ರಕ್ಷಣೆಯೂ, ಆಗುವುದು" ಎಂದರು. ಸರ್ವ ವಿದ್ಯೆಗಳಲ್ಲೂ, ವಿಶಾರದರಾದ ವಿದ್ಯಾನಂದರು ತಮ್ಮ ಪರಮ ಗುರುಗಳ ಆಜ್ಞೆಯನ್ನು ಶಿರಸಾವಹಿಸಿ, ಅಲ್ಲಿನಿಂತು ಈಶ್ವರಾರಾಧನೆಯಲ್ಲಿ ತತ್ಪರರಾದರು. ರಘುಕುಲದಲ್ಲೆಲ್ಲಾ ಉತ್ತಮನಾದ ಶ್ರೀ ರಾಮನೇ ಈ ಮಠದ ಮುಖ್ಯಾಧಿದೇವತೆಯಾದ್ದರಿಂದ ಇದಕ್ಕೆ "ರಘೂತ್ತಮ ಮಠ" ವೆಂದು ನಾಮಕರಣವಾಯಿತು.

ನಂತರ ಶಂಕರಾಚಾರ್ಯರು ಮುಂದೆಹೋಗಿ ಜಗನ್ನಾಥಪುರಿ, ದ್ವಾರಕಿ ಮುಂತಾದ ಸ್ಥಳಗಳಲ್ಲೆಲ್ಲಾ ಮಠಗಳನ್ನು ಸ್ಥಾಪಿಸಿ, ಗುಹಾ ಪ್ರವೇಶ ಮಾಡಿದರು. ಈ ವರೆಗೆ ಪ್ರಾಪ್ತವಾದ ಇತಿಹಾಸದ ಆಧಾರಗಳಿಂದ ಶಂಕರಾಚಾರ್ಯರು ಶೃಂಗೇರಿ, ಕಾಂಚಿ, ಗೋಕರ್ಣ, ಉಡುಪಿಯ ಹತ್ತಿರ ಅನಂತೇಶ್ವರ, ದ್ವಾರಕಾ, ಬದರೀ, ಜಗನ್ನಾಥಪುರಿ, ಈ ಏಳು ಸ್ಥಾನಗಳಲ್ಲಿ ಸ್ವತಃ ಮಠಸ್ಥಾಪನೆಮಾಡಿ, ಅಲ್ಲಿ ತಮ್ಮ ಶಿಷ್ಯ, ಪ್ರಶಿಷ್ಯರನ್ನು ಪ್ರತಿಷ್ಠಿಸಿದರೆಂಬುದು ತಿಳಿದು ಬರುತ್ತದೆ.

ಹೀಗೆ ಗೋಕರ್ಣದಲ್ಲಿ ಶಂಕರಾಚಾರ್ಯರಿಂದ ದತ್ತವಾದ ತಪೋರಾಮಾದಿ ವಿಗ್ರಹ ಮತ್ತು ಚಂದ್ರಮೌಳೀಶ್ವರ, ಶ್ರೀ ಆಚಾರ್ಯರ ಪಾದುಕೆಗಳನ್ನು ಆರಾಧಿಸುತ್ತಲಿದ್ದ ಶ್ರೀ ವಿದ್ಯಾನಂದಾಚಾರ್ಯರು ಬ್ರಹ್ಮ ಚಿಂತನಪರರಾಗಿ ಗೋಕರ್ಣ ಮಂಡಲಾಚಾರ್ಯತ್ವವನ್ನು ವಹಿಸಿದರು. ಶತಶೃಂಗ ಪರ್ವತ, ಮಹಾಬಲೇಶ್ವರ ದೇವತೆ, ಕೋಟಿತೀರ್ಥ, ಭಾಸ್ಕರಕ್ಷೇತ್ರ, ಮಹಾವಾಕ್ಯ ಸಂಪ್ರದಾಯ, ಇವುಗಳು ಈ ವಿದ್ಯಾನಂದರ ಪ್ರಭಾವದಿಂದ ಇವರ ಶಿಷ್ಯವರ್ಗದವರಾದ ಹವ್ಯಕ ಬ್ರಾಹ್ಮಣರಿಗೆ ಪೂಜ್ಯವಾದವು.

ಶ್ರೀ ಸುರೇಶ್ವರಾಚಾರ್ಯರ ಜ್ಯೇಷ್ಠ ಶಿಷ್ಯರಾದ ವಿದ್ಯಾನಂದಾಚಾರ್ಯರಿಂದ "ರಘೂತ್ತಮ" ಮಠ (ರಾಮಚಂದ್ರಪುರ ಮಠ) ದ ಪರಂಪರೆಯೂ, ನಿತ್ಯಬೋಧಘನಾಚಾರ್ಯರೆಂಬ ಎರಡನೇ ಶಿಷ್ಯರಿಂದ "ಶೃಂಗೇರಿ" ಮಠದ ಪರಂಪರೆಯೂ, ಸ್ವತಂತ್ರವಾಗಿಯೇ ನಡೆಯುತ್ತ ಬಂದವು. ನಿತ್ಯಬೋಧಘನಾಚಾರ್ಯರು ಶೃಂಗೇರಿ ಪೀಠದಲ್ಲಿದ್ದ ಕಾಲವು ೬೯೫ ರಿಂದ ೭೭೦ ನೇ ಶಾ. ಶಕೆಯ ವರೆಗೆಂದು ನಿರ್ಣಯಿಸಲ್ಪಟ್ಟಿದೆ. ಶ್ರೀ ಶಂಕರಾಚಾರ್ಯರ ಗುಹಾ ಪ್ರವೇಶವು ಶಾ. ಶಕೆ ೬೪೨ (ಕ್ರಿ. ಶ. ೭೨೦) ಎಂದು ಲೋಕಮಾನ್ಯ ತಿಲಕರ ಅಭಿಪ್ರಾಯ. ಈ ಅಭಿಪ್ರಾಯದಂತೆ ಅವರ ಗುಹಾ ಪ್ರವೇಶಕ್ಕಿಂತ ಕೊಂಚಕಾಲ ಪೂರ್ವದಲ್ಲಿ

ಅಂದರೆ ಶಾ. ಶ. ೭೩೫-೭೪೦ ರ ಮಧ್ಯಂತರಕಾಲದಲ್ಲಿ ಗೋಕರ್ಣದಲ್ಲಿ ರಘೂತ್ತಮ ಮಠದ ಸ್ಥಾಪನೆಯಾಯಿತು.

ಈ ಮಠದ ನಾಮಸಂಪ್ರದಾಯವು ಶೃಂಗೇರಿ ಸಂಪ್ರದಾಯದಂತೆ ಭಾರತಿ, ಸರಸ್ವತಿ, ಪುರಿ ಎಂದಾಗಿದೆ. ಈ ಮಠ ಭೂತಿವಾರ ( ಭೂರಿವಾಲ ) ಸಂಪ್ರದಾಯವೆಂತ ಕೆಲವರು ಹೇಳುವರು. ಆದರೆ ಶಕೆ ೧೩೧೧ ನೇ ಶುಕ್ಲ ಸಂ॥ ದಲ್ಲಿ ವಿದ್ಯಾರಣ್ಯರು ಈ ಮಠದ ೯ನೇ ತಲೆಯವರಾದ ಚಿದ್ಬೋಧಭಾರತೀಸ್ವಾಮಿಗಳಿಗೆ ಕೊಟ್ಟ ವೈಭವ ತಾಮ್ರಶಾಸನದಲ್ಲಿ ಶೃಂಗೇರಿ ಮತ್ತು ಈ ಮಠಗಳೆರಡೂ ಭೋಗವರ್ಧನ ( ಭೋಗವಾಲ (ರ) ) ವಾಲ ಸಂಪ್ರದಾಯವೆಂತ ಸ್ಪಷ್ಟವಾಗಿದೆ.

೧. **ವಿದ್ಯಾಸಂದಾಚಾರ್ಯ:-** ಈ ರಘೂತ್ತಮ ಮಠದ ಮೊಟ್ಟ ಮೊದಲನೆಯ ಸ್ವಾಮಿಗಳವರು. ಇವರ ಕಾಲ ೭೨೦ ನೇ ಕ್ರಿ. ಶಕ.

೨. **ಚಿದ್ಬೋಧಭಾರತೀಸ್ವಾಮಿಗಳವರು:-** ವಿದ್ಯಾನಂದರ ಶಿಷ್ಯರು.

೩. **ನಿತ್ಯಾನಂದಭಾರತೀ:-**

೪. **ನಿತ್ಯಬೋಧಘನೇಂದ್ರಭಾರತೀ:-** ಇವರು ವಿದ್ಯಾಪ್ರತಿಭೆಗಳಿಂದ ವಿಖ್ಯಾತರಾಗಿದ್ದರು.

೫. **ಸಚ್ಚಿದಾನಂದ ಭಾರತೀ:-**

೬. **ಚಿದ್ಘನೇಂದ್ರಭಾರತೀ:-**

೭. **ರಘುವೀರೇಂದ್ರಭಾರತೀ:-** ( ಮೇಲಿನ ಚಿದ್ಘನೇಂದ್ರಭಾರತಿಗಳ ಮತ್ತೊಂದುನಾಮ. )

೮. **ಸೀತಾರಾಮಚಂದ್ರಭಾರತೀ:-**

೯. **ಚಿದ್ಬೋಧಭಾರತೀ:-** ಇವರು ವಿದ್ಯಾರಣ್ಯರಕಾಲದಲ್ಲಿ ಇದ್ದರು. ೧೩೧೧ ನೇ ಶಾಲಿವಾಹನ ಶಕೆ (ಕ್ರಿ. ಶ. ೧೩೮೯-೯೦) ಶುಕ್ಲ ಸಂ॥ದಲ್ಲಿ ಶ್ರೀ ವಿದ್ಯಾರಣ್ಯರು ಕೊಟ್ಟ ವೈಭವ ತಾಮ್ರಶಾಸನದಲ್ಲಿ ಈ ಮಠದ ಅಧಿಕಾರವ್ಯಾಪ್ತಿ, ಸ್ಥಾನಮಾನಾದಿಗಳು ವಿಶೇಷವಾಗಿ ಕಂಡುಬರುತ್ತವೆ. ಇದರಲ್ಲಿ ಋಷ್ಯಶೃಂಗ ಪುರಾಧಿವಾಸ ನಿತ್ಯಬೋಧಘನಾಚಾರ್ಯ, ಜ್ಯೇಷ್ಠ ವಿದ್ಯಾನಂದಾಚಾರ್ಯ ಕವಲಿನ ಪರಂಪರೆಯೆಂತಲೂ ಹೈವ ದೇಶಸ್ಥಿತ ಹೈವ ದ್ರಾವಿಡ ಸಂಜ್ಞಿತ ಬ್ರಾಹ್ಮಣ್ಯ ಧರ್ಮಾಚಾರ ತತ್ಪುರಸ್ಸರ ಪ್ರಾಯಶ್ಚಿತ್ತ ಅಗ್ರತೇಜಪೂಜೆ ಸ್ಥಾನ ಮಾನ್ಯ ಗೋಕರ್ಣ ಮಂಡಲಾಚಾರ್ಯರೆಂತಲೂ, ಉಭಯ ಸಂಪ್ರದಾಯವೂ ಒಂದೇ ಎಂತಲೂ ಹೊಗಳಿದೆ. ಶ್ರೀ ಮಹಾಬಲೇಶ್ವರ ಸನ್ನಿಧಿಯಲ್ಲೇ ಸಿಂಹಾಸನ

ಕಿರೀಟ, ಆಂದೋಳಿಕ, ಶ್ವೇತಛತ್ರ, ಉಭಯಚಾಮರ, ಮಕರ ತೋರಣ, ವ್ಯಜನ, ಹಗಲುಜ್ಯೋತಿ, ಪೀತ ಪಿಶಂಗವರ್ಣ ಪತಾಕಾದಿಚಿಹ್ನೆಗಳು, ತಾಳ, ಶಂಖಚಕ್ರಾದಿ ವಾದ್ಯಗಳು ಕೊಡಲ್ಪಟ್ಟು ನಾಲ್ಕುದೇಶ (ಹೈವ, ತುಳು, ಮಲೆಯಾಳ, ಮೂಷಿಕ,) ಗಳಲ್ಲೂ ಈಬಿರುದುಬಾವಲಿಗಳೊಡನೆ ಸಂಚರಿಸಿ, ತಮ್ಮ ಅಧಿಕಾರವನ್ನು ಪ್ರಕಾಶಿಸಿ ಕೊಂಡು ಬರಬಹುದೆಂಬ ವೈಭವವು ವ್ಯಕ್ತವಾಗಿದೆ. ಇದರಿಂದ ಆಗಲೇ ವಿಜಯನಗರ ರಾಜ್ಯದಿಂದಲೂ, ಈ ಮಠವು ಸತ್ಕೃತವಾಗಿತ್ತೆಂಬುದು ತಿಳಿದು ಬರುತ್ತದೆ.

೧೦. **ರಾಘವೇಶ್ವರ ಭಾರತೀ:–** ಇವರು ಕಾಶಿಯಲ್ಲಿ ವಿದ್ಯಾಭ್ಯಾಸ ಮಾಡಿದ್ದರು. ಬರುವಾಗ ಒಂದು ಸಹಸ್ರ ಶಾಲಿಗ್ರಾಮಗಳನ್ನು ತಂದು ಮಠ ದಲ್ಲಿಟ್ಟರು. ಈ ಸಮಯದಲ್ಲಿ ವಿಜಯನಗರದ ಅರಸನಾದ ಮಲ್ಲಿಕಾರ್ಜುನರಾಯ ಅಥವಾ ಇಮ್ಮಡಿ ದೇವರಾಯನು ಶಾ. ಶಕೆ ೧೩೬೬ ( ಕ್ರಿ. ಶ. ೧೪೬೩ ) ಸ್ವಭಾನು ಸಂವತ್ಸರದಲ್ಲಿ ಆಂದೋಳಿಕೋಪರಿ ಪಂಚಕಲಶ ಮತ್ತು ಪಂಚದೀವಟಿಕಾದ್ವಯ ಗಳನ್ನು ಅಧಿಕರಿಸಿಕೊಟ್ಟನೆಂದು, ಆತನು ಬರೆಸಿಕೊಟ್ಟ ತಾಮ್ರಶಾಸನದಿಂದ ಗೊತ್ತಾಗುತ್ತದೆ. ಇವರಿಗೆ ರಾಮಚಂದ್ರ ಭಾರತೀ ಎಂಬ ಶಿಷ್ಯರಿದ್ದು ಇವರಿಗೂ ರಾಘವೇಶ್ವರರಿಗೂ, ಕಾರಣಾಂತರಗಳಿಂದ ತಾಳೆ ಬೀಳದೆ, ರಾಮಚಂದ್ರ ಭಾರತಿಗಳು ಹೊರಟು, ಘಟ್ಟದಮೇಲಿನ ಹೊಸನಗರ ತಾಲ್ಲೂಕು ರಾಮಚಂದ್ರ ಪುರವೆಂಬ ಸ್ಥಳದಲ್ಲಿ ಒಂದು ಕುಟೀರವನ್ನು ಕಟ್ಟಿಕೊಂಡು ಕುಳಿತರು. ಮತ್ತೊಬ್ಬ ಶಿಷ್ಯರಾದ ರಘೂತ್ತಮ ಭಾರತಿಗಳು ಗೋಕರ್ಣವನ್ನು ಬಿಟ್ಟು ಹೊನ್ನಾವರದ ಹತ್ತಿರ " ಕೆಕ್ಕಾರು " ಎಂಬ ಸ್ಥಳದಲ್ಲಿ ಒಂದು ಮಠವನ್ನು ಸ್ಥಾಪಿಸಿದರು.

೧೧. **ರಾಮಚಂದ್ರಭಾರತೀ:–** ಇಕ್ಕೇರಿಯ ಅರಸರಲ್ಲಿ ಕೆಳದಿ ಸಂಸ್ಥಾನ ಸ್ಥಾಪಕನಾದ ಚೌಡಪ್ಪನಾಯಕನು ಕ್ರಿ. ಶ. ೧೫೦೦ ರಿಂದ ೧೫೧೪ ರ ವರೆಗೆ ಆಳುತ್ತಿದ್ದನು. ಇದೇ ಸಮಯದಲ್ಲಿ ಹಂಪೆಯಲ್ಲಿ ಸೋಮಣ್ಣನಾಯಕನು ಅರಸನಾಗಿದ್ದನು. ಇವರು ತಮ್ಮ ತಪೋನಿಷ್ಠೆ, ವಿದ್ಯಾಪ್ರತಿಭೆಗಳಿಂದ ಮೆಚ್ಚಿಸಿ, ಹಂಪೆಯ ಸೋಮಣ್ಣನಾಯಕನಿಂದಲೂ, ಕೆಳದಿ ಮತ್ತು ನಗರ ಸಂಸ್ಥಾನಿಕ ರಿಂದಲೂ, ಹಲವು ಉಂಬಳಿ ಉತಾರುಗಳನ್ನು ಪಡೆದು ನಗರದಿಂದ ದಕ್ಷಿಣಕ್ಕೆ ಶರಾವತಿ ನದೀತೀರದಲ್ಲಿ ಅಗಸ್ತ್ಯ ತೀರ್ಥದ ಉತ್ತರ, ಶ್ರೀಕಾರ್ಣಗಿರಿಯ ಉತ್ತರ ಪೂರ್ವಗಳ ಮಧ್ಯಭಾಗದ ಪ್ರದೇಶದಲ್ಲಿ ಒಂದು ಕುಟೀರವನ್ನು ಕಟ್ಟಿದರು. ಈ ಪ್ರದೇಶವು ಜನಸಂದಣಿಯಿಂದ ದೂರವಾಗಿದ್ದು ಸುಶಾಂತವೂ, ಏಕಾಂತವೂ, ಆಗಿ ತಪಸ್ಸಿಗನುಕೂಲವಾದ್ದರಿಂದಲೂ, ಈ ಪ್ರಾಂತ್ಯದಲ್ಲಿ ಇಷ್ಟೊತ್ತಿಗಾಗಲೇ

ಹವ್ಯಕ ಬ್ರಾಹ್ಮಣರ ಅನೇಕ ಕುಟುಂಬಗಳು ಬಂದು ನೆಲಸಿದ್ದರಿಂದಲೂ, ನಗರ ಸಂಸ್ಥಾನಿಕರಿಂದ ಉಂಬಳಿ ಜಮೀನು ಪ್ರಾಪ್ತವಾದ್ದರಿಂದಲೂ, ಇವರು ಈ ಪ್ರದೇಶದಲ್ಲಿ ನೆಲೆಸಲು ವಿಶೇಷ ಆಸಕ್ತಿಪಟ್ಟರು. ತಮ್ಮ ಆರಾಧ್ಯ ದೇವನಾದ ಶ್ರೀ ರಾಮಚಂದ್ರನ ಹೆಸರಿನಲ್ಲಿ ಈ ಸ್ಥಳಕ್ಕೆ "ರಾಮಚಂದ್ರಪುರ" ವೆಂತ ನಾಮಕರಣಮಾಡಿದರು. ಮತ್ತು ರಾಮಚಂದ್ರಭಾರತೀಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ ಈ ಊರಿಗೆ "ರಾಮಚಂದ್ರಪುರ" ವೆಂತಲೂ ಅನ್ವರ್ಥಕಮಾಡಿಕೊಳ್ಳಬಹುದು. ಇಲ್ಲಿ ಸೀತಾರಾಮಲಕ್ಷ್ಮಣ ವಿಗ್ರಹಗಳನ್ನು ಸ್ಥಾಪಿಸಿ, ದೇವಾಲಯವನ್ನು ನಿರ್ಮಿಸಿದರು.

ಕ್ರಿ.ಶ. ೭೧೬ ರರ ಸುಮಾರಿನಿಂದ ಕ್ರಿ.ಶ. ೧೫೦೦ ರರ ವರೆಗೆ ಗೋಕರ್ಣದಲ್ಲಿ ರಘೂತ್ತಮ ಮಠವೆಂದು ಹೆಸರಾಗಿದ್ದು ಈ ಲಾಗಾಯ್ತು ಶ್ರೀ ರಾಮಚಂದ್ರಪುರ ಮಠವೆಂದು ಪ್ರಸಿದ್ಧವಾಯಿತು. ಗೋಕರ್ಣದ ಮಠದಲ್ಲಿ ೧೦ ನೇ ರಾಘವೇಶ್ವರ ಭಾರತಿಗಳವರೇ ಕೊನೆಯವರಾದರು. ಘಟ್ಟದ ಕೆಳಗೆ ಕೆಕ್ಕಾರಿನ ಮಠದಲ್ಲಿ ರಘೂತ್ತಮ ಭಾರತಿಗಳೆಂಬುವರೇ ಮೊದಲನೆಯ ಸ್ವಾಮಿಗಳಾದರು. ರಾಮಚಂದ್ರಪುರಮಠದಲ್ಲಿ ರಾಮಚಂದ್ರ ಭಾರತಿಗಳೇ ಮೊದಲನೇ ಸ್ವಾಮಿಗಳಾದರು. ರಾಮಚಂದ್ರಪುರಮಠವು ಪ್ರಧಾನ ಮಠವಾಯಿತು.

ಅಂದಿನಿಂದ ಮೂಲಮಠವಾದ ಗೋಕರ್ಣದ ರಘೂತ್ತಮ ಮಠದಲ್ಲಿ ಪ್ರತ್ಯೇಕ ಮಠಾಧಿಪತಿಗಳಿಲ್ಲ. ಅಲ್ಲಿರುವ ಅಗಸ್ತ್ಯ ಪ್ರದತ್ತವಾದ ತಪೋರಾಮಾದಿ ವಿಗ್ರಹಗಳ ಪೂಜೆಯು, ಅರ್ಚಕರಿಂದ ಇಂದಿಗೂ ನಡೆಯುತ್ತಿದೆ. ಈ ಲಾಗಾಯ್ತು ೧೩ ತಲೆಗಳವರೆಗೆ ಕೆಕ್ಕಾರಿನ ಮಠದಲ್ಲೂ ಆಶ್ರಮ ಪರಂಪರೆಯು ನಡೆಯುತ್ತಾ ಬಂದಿತು.

**ಕೆಕ್ಕಾರಿನ ಮಠದ ಗುರುಪರಂಪರೆ.**

೧. **ರಘೂತ್ತಮಭಾರತೀ.**
೨. **ವಿಶ್ವರೂಪಭಾರತೀ.**
೩. **ಸತ್ಯರೂಪಭಾರತೀ.**
೪. **ಸರ್ವೇಶ್ವರಭಾರತೀ.**
೫. **ರಘುನಾಥಭಾರತೀ.**
೬. **ನರಸಿಂಹಭಾರತೀ.**
೭. **ರಾಮಚಂದ್ರಭಾರತೀ :–** ಇವರ ಶಿಷ್ಯರಲ್ಲೊಬ್ಬರು ಇವರಿಂದ ದೀಕ್ಷೆಪಡೆದು, ನೆಲೆಮಾವಿನಮಠದಲ್ಲಿ ಉಳಿದರು.

**೮. ರಘೂತ್ತಮಭಾರತೀ.**
**೯. ರಾಘವೇಶ್ವರಭಾರತೀ.**
**೧೦. ರಘುನಾಥಭಾರತೀ.**
**೧೧. ರಘೂತ್ತಮಭಾರತೀ.**
**೧೨. ರಾಮಚಂದ್ರಭಾರತೀ.**

**೧೩. ರಾಘವೇಶ್ವರಭಾರತೀ:-** ಈ ರೀತಿಯಾಗಿ ೧೩ ತಲೆಗಳು ಕೆಕ್ಕಾರಿನ ಮಠದಲ್ಲಿ ನಡೆಯುತ್ತಬಂತು. ಈ ೧೩ ನೇ ರಾಘವೇಶ್ವರಭಾರತಿಗಳು ರಾಮಚಂದ್ರಪುರದ ೨೯ನೇ ರಾಮಚಂದ್ರ ಭಾರತಿಗಳು ಇನ್ನೂ ಚಿಕ್ಕವರಾದ್ದರಿಂದ ರಾಮಚಂದ್ರಪುರದಲ್ಲೇ ವಸತಿಮಾಡಿ, ಎಲ್ಲ ಆಡಳಿತಗಳನ್ನೂ ನೋಡಿಕೊಳ್ಳುತ್ತಿದ್ದರು. ಇವರು ಶಾ. ಶ. ೧೭೪೭ ನೇ ಪಾರ್ಥಿವ ಸಂ|| ರದಲ್ಲಿ ಮುಕ್ತರಾದನಂತರ ೨೯ ನೇ ರಾಮಚಂದ್ರಭಾರತಿಗಳೇ ಕೆಕ್ಕಾರಿನ ಮಠಕ್ಕೂ ಅಧಿಕಾರಿಗಳಾದರು. ಇಷ್ಟರನಂತರ ಕೆಕ್ಕಾರಿನಲ್ಲಿ ಆಶ್ರಮವಾಗಲಿಲ್ಲ. ಅಲ್ಲಿ ಬೇರೇ ಮಠಾಧಿಪತಿಗಳಿಲ್ಲ.

**೧೨. ಅಭಿನವ ರಾಘವೇಶ್ವರಭಾರತೀ:-** ಇವರು ರಾಮಚಂದ್ರಭಾರತಿಗಳಶಿಷ್ಯರು. ರಾಮಚಂದ್ರಪುರದಲ್ಲೇ ಇದ್ದು, ಆಡಳಿತ ನಡೆಸಿದರು.

**೧೩. ರಾಮಯೋಗೀಂದ್ರಭಾರತೀ**
**೧೪. ನರಸಿಂಹಭಾರತೀ.**

**೧೫. ಅನಂತೇಂದ್ರಭಾರತೀ:-** ಇವರು ತಮ್ಮ ಶಿಷ್ಯರಾದ ರಾಮಭದ್ರಭಾರತಿಗಳನ್ನು ರಾಮಚಂದ್ರಪುರದಲ್ಲಿ ಕೂಡ್ರಿಸಿ ತಾವು "ಬಿದರಕಾಲು" ಎಂಬ ಸ್ಥಳದಲ್ಲಿ ಒಂದು ಮಠ ಸ್ಥಾಪನೆಮಾಡಿ, ಅಲ್ಲಿ ಮಠಕ್ಕೆ ಕೆಲವು ಆಸ್ತಿಗಳನ್ನು ಸಂಗ್ರಹಿಸಿದರು.

**೧೬. ರಾಮಭದ್ರಭಾರತೀ:-** ಇವರು ರಾಮಚಂದ್ರಪುರದಲ್ಲಿ ಇದೂವರೆಗೆ ಸಾಧಾರಣ ಕುಟೀರದಂತಿದ್ದ ಮಠವನ್ನು ವಿಶಾಲವಾಗಿಯೂ, ಭದ್ರವಾಗಿಯೂ ಕಟ್ಟಿಸಿದರು.

**೧೭. ರಾಘವೇಶ್ವರಭಾರತೀ.**
**೧೮. ವಿದ್ಯಾಘನೇಂದ್ರಭಾರತೀ.**

**೧೯. ರಘುನಾಥಭಾರತೀ:-** ಇವರು ೧೫೬೫ ನೇ ಕ್ರಿ. ಶ. ಕ್ರೋಧನ ಸಂ|| ದಲ್ಲಿ ಪಟ್ಟಕ್ಕೆ ಬಂದರೆಂದು ತಿಳಿಯುತ್ತದೆ. ಇದೇ ಸಮಯದಲ್ಲಿ ತೀರ್ಥಹಳ್ಳಿಯಲ್ಲಿ ಒಂದು ಮಠ ಸ್ಥಾಪನೆಯಾಗಿದ್ದು, ಆ ಕಾಲದಲ್ಲಿ ಅಲ್ಲಿದ್ದ ೬೨ ಹವ್ಯಕ

ಬ್ರಾಹ್ಮಣರ ಮನೆಗಳ ಮೇಲ್ವಿಚಾರಣೆಯು ಈ ಶಾಖಾಮಠದ ಮೂಲಕ ನಡೆಯುತ್ತಿತ್ತು.

೨೦. **ರಾಮಚಂದ್ರಭಾರತೀ.**

೨೧. **ರಘೂತ್ತಮಭಾರತೀ.**

೨೨. **ಪರಮೇಶ್ವರಭಾರತೀ.**

೨೩. **ರಾಘವೇಶ್ವರಭಾರತೀ:–** ( ವೆಂಕಟೇಶ್ವರಭಾರತೀ. )

೨೪. **ರಘೂತ್ತಮಭಾರತೀ:–** ಕ್ರಿ. ಶ. ೧೭೪೫ ರಲ್ಲಿದ್ದ ಇಕ್ಕೇರಿ ಬಸಪ್ಪ ನಾಯಕನ ನಿರೂಪ ಒಂದರಲ್ಲಿ ರಾಮಚಂದ್ರಪುರಮಠಕ್ಕೆ ರಾಯದತ್ತವಾದ ದಿವಾಜ್ಯೋತಿ, ಮಕರ ತೋರಣಾದಿ ಬಿರುದುಬಾವಲಿಗಳನ್ನು, ಹೊನ್ನೆಹಳ್ಳಿ ( ಸ್ವರ್ಣವಲ್ಲಿ ) ಮುಂತಾದ ತುಂಡು ಮಠಾಧಿಪತಿಗಳು ಯಾವಾಗಲೂ ವಹಿಸಿ, ಸಂಚರಿಸಕೂಡದೆಂದು ಬರೆದಿರುತ್ತೆ. ಇದರಿಂದ ಇವರ ಪ್ರತಿಭೆಯು ಅನೂಚೀನವಾಗಿಯೂ, ಅವಿಚ್ಛಿನ್ನವಾಗಿಯೂ, ರಾಜಮಾನ್ಯತೆ ಪಡೆದಿತ್ತೆಂಬುದು ವ್ಯಕ್ತವಾಗುತ್ತದೆ.

೨೫. **ರಾಘವೇಶ್ವರಭಾರತೀ.**

೨೬. **ರಘೂತ್ತಮಭಾರತೀ.**

೨೭. **ರಾಘವೇಶ್ವರಭಾರತೀ.**

೨೮. **ರಘೂತ್ತಮಭಾರತೀ.**

೨೯. **ರಾಘವೇಶ್ವರಭಾರತೀ:–** ಇವರು ಇಸವಿ ಸ೯ ೧೮೦೮ ರಲ್ಲಿದ್ದರು.

೩೦. **ರಾಮಚಂದ್ರಭಾರತೀ:–** ಇವರು ೧೮೬೫ ನೇ ಕ್ರಿ. ಶಕೆಯಲ್ಲಿದ್ದರು. ರಾಮಚಂದ್ರಪುರದ ಸಮೀಪದಲ್ಲೇ ಇದ್ದ ಹೆದಲಿ ಗ್ರಾಮದಲ್ಲಿ ಜನಿಸಿದರು. ಇವರು ೧೨ ನೇ ವಯಸ್ಸಿನಲ್ಲೇ ಪಟ್ಟಕ್ಕೆಬಂದರು. ಮಠದಲ್ಲೇ ಶಾಸ್ತ್ರಾಧ್ಯಯನಾದಿಗಳನ್ನು ಮಾಡಿ, ತಪೋನಿಷ್ಠರಾಗಿದ್ದರು. ಇವರು ಚಿಕ್ಕವರಾದ್ದರಿಂದ ಮಠದ ಆಡಳಿತ, ಶಿಷ್ಯರ ಆಚಾರ ವಿಚಾರಾದಿಗಳನ್ನು ಕೆಕ್ಕಾರು ಮಠದ ಕೊನೆಯ ಸ್ವಾಮಿಗಳಾದ ೧೩ ನೇ ರಾಘವೇಶ್ವರಭಾರತಿಗಳೇ ನೋಡಿಕೊಳ್ಳುತ್ತಾ ಈ ಚಿಕ್ಕಸ್ವಾಮಿಗಳವರಿಗೆ ಪಾಠಪ್ರವಚನಾದಿಗಳನ್ನು ನಡೆಸುತ್ತಿದ್ದರು.

ಇವರು ಚಿಕ್ಕವರಾಗಿರುವಾಗಲೇ ಇವರ ಗುರುಗಳಾದ ೨೯ ನೇ ರಾಘವೇಶ್ವರಭಾರತಿಗಳು ಮುಕ್ತರಾದರು. ಈ ಸಮಯದಲ್ಲಿ ರಾಮಚಂದ್ರಪುರಮಠದ ಅಧೀನಮಠವಾದ ನೆಲೆಮಾವಿನ ಮಠದಲ್ಲಿದ್ದ ರಾಘವೇಶ್ವರ ಸ್ವಾಮಿಗಳೆಂಬುವರು

ಬಂದು ಮಠವನ್ನು ಆಕ್ರಮಿಸಿದ್ದರು. ಈ ವಿಷಯವು ಮೈಸೂರು ದೊರೆಗಳಾದ ಮುಮ್ಮಡಿ ಕೃಷ್ಣರಾಜವಡೆಯರಲ್ಲಿ ತಿಳಿಸಲಾಗಿ ಮೈಸೂರಿನ ವಿದ್ವತ್ಸಭೆಯಲ್ಲಿ ಕೊನೇತೀರ್ಮಾನವಾಗಿ, ( ಕ್ರಿ. ಶ. ೧೮೧೪ ) ರಾಮಚಂದ್ರಭಾರತಿಗಳೇ ಹಕ್ಕುದಾರರೆಂತ ಪುನಃ ರಾಮಚಂದ್ರ ಭಾರತಿಗಳಿಗೆ ವಹಿಸಲ್ಪಟ್ಟಿತು. ಇದೇ ಕಾಲದಲ್ಲಿ ಕೆಲವು ಜನ ಶಿಷ್ಯರು ಬಂಡಾಯವೆದ್ದು, ಗುರುಕಾಣಿಕೆ, ಆಚಾರವಿಚಾರ ಮುಂತಾದ ವಿಷಯಗಳಲ್ಲಿ ತಕರಾರು ನಡೆಸಿದರು. ಇದೂ ಸಹ ಮುಮ್ಮಡಿ ಕೃಷ್ಣರಾಜ ಒಡೆಯರವರಲ್ಲಿ ವಿಚಾರ ನಡೆದು ಇನ್ನು ಮುಂದೆ ಇಂಥ ತಕರಾರಿಗೆ ಆಸ್ಪದ ಕೊಡದೆ, ಹಿಂದಿನಂತೆಯೇ ಎಲ್ಲಾ ಧಾರ್ಮಿಕ ಆಚಾರ ವಿಚಾರ, ಗುರು ಕಾಣಿಕೆಗಳನ್ನು ವಿಧೇಯರಾಗಿ ಶಿಷ್ಯರೆಲ್ಲರೂ ಕೊಡುತ್ತಾ ಬರಬೇಕೆಂದೂ, ಇದಕ್ಕೆ ಇವರೇ ಸ್ವತಂತ್ರ ಹಕ್ಕುದಾರರೆಂತಲೂ, ತಾ|| ೧೬–೧೧–೧೮೧೪ ರಲ್ಲಿ ಆರ್ಡರ್ ಕೊಟ್ಟಿರುತ್ತಾರೆ. ಇವರ ಕಾಲದಲ್ಲಿ ಕೆಕ್ಕಾರು ಮಠವು ರಾಮಚಂದ್ರಪುರ ಮಠದಲ್ಲಿ ವಿಲೀನವಾಯಿತು.

ಇವರು ಇ|| ಸ್ ೧೮೨೭ ನೇ ವ್ಯಯ ಸಂವತ್ಸರದಲ್ಲಿ ಪುಷ್ಯ ಬಹುಳ ೭, ಶನಿವಾರದದಿನ ತಮ್ಮ ರಾಯದತ್ತವಾದ ಬಿರುದುಬಾವಲಿಗಳೊಡನೆ ಕಳಸದ ಸಮೀಪದಲ್ಲಿ ಸಂಚಾರಹೊರಟಾಗ ಶೃಂಗೇರಿಮಠದ ಶೇಷಜೋಯ್ಸಿ ಎಂಬುವನು ಸುಮಾರು ೩೦೦ ಜನ ಆಯುಧಪಾಣಿಗಳೊಡನೆ ಬಂದು ಬಿರುದುಬಾವಲಿಗಳು, ಆನೆ, ಕುದುರೆ ಮುಂತಾದ್ದನ್ನೆಲ್ಲಾ ಅಪಹರಿಸಿಕೊಂಡು ಹೋದನು. ಆಗ ಶಿಷ್ಯ ಮಹಾಮಂಡಲಿ ಮತ್ತು ಸ್ವಾಮಿಗಳವರ ಕೋರಿಕೆಯಂತೆ ಮುಮ್ಮಡಿ ಕೃಷ್ಣರಾಜ ಒಡೆಯರು ಅವುಗಳನ್ನೆಲ್ಲಾ ವಾಪಸ್ಸು ಕೊಡಿಸಿ ಯೋಗ್ಯಮರ್ಯಾದೆಯಿಂದ ಕಳಿಸಿಕೊಟ್ಟರು. ತೀರ್ಥಹಳ್ಳಿ, ಕೊಡಗು ಈ ಕಡೆಗಳಲ್ಲೂ ಇದೇರೀತಿ ನಡೆದು ಅದನ್ನು ಸ್ಥಳೀಯ ಅಧಿಕಾರಿಗಳೇ ಕೊಡಿಸಿದರು. ಅಂತೂ ಇವರು ಪೀಠಾರೂಢರಾದಲಾಗಾಯ್ತು ಹಲವು ತರದ ತೊಂದರೆ ತಾಪತ್ರಯಗಳನ್ನು ಸಹಿಸುತ್ತ ತಮ್ಮ ಅಧಿಕಾರ ಸ್ಥಾಪನೆ ಮಾಡಿಕೊಳ್ಳುವುದರಲ್ಲೇ ಇವರ ಹೆಚ್ಚುಕಾಲವು ಕಳೆದುಹೋಯಿತು.

**೩೧. ರಾಘವೇಂದ್ರಭಾರತೀ:**–ರಾಮಚಂದ್ರಭಾರತಿಗಳ ಶಿಷ್ಯರಾದ ರಾಘವೇಂದ್ರಭಾರತಿಗಳೆಂಬುವರು ಕೆಕ್ಕಾರು ಗ್ರಾಮದಲ್ಲಿ " ಹೊಸೂರುಮನೆ " ಎಂಬ ಮನೆತನದಲ್ಲಿ ಹುಟ್ಟಿದವರು. ಇವರು ಸುಮಾರು ೧೫ ನೇ ವರ್ಷದಲ್ಲಿ ಪೀಠಕ್ಕೆ ಬಂದಿದ್ದು, ಕಾಶಿಯಲ್ಲಿ ನ್ಯಾಯ ಮೀಮಾಂಸಾದಿ ಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದಿದ್ದರು. ಮಠಾಡಳಿತದಲ್ಲಿ ಉಂಟಾಗಿದ್ದ ಅವ್ಯವಸ್ಥೆಯನ್ನೆಲ್ಲಾ ಸರಿಪಡಿಸಿ, ಬಹಳ ಸುಧಾರಣೆಮಾಡಿದರು.



|| ಶ್ರೀಮದ್ರಾಘವೇಶ್ವರ ಭಾರತೀ ಸ್ವಾಮಿಗಳವರು ||

ಇವರ ಕಾಲದಲ್ಲಿ ಉ. ಕ. ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನಲ್ಲಿರುವ ಕೊಂಬಿನಕೈಮಠ, ಕಡೂರು ಡಿಸ್ಟ್ರಿಕ್ಟಿನ ಕಳಸದಲ್ಲಿರುವ ರುದ್ರಪಾದಮಠ, ಸಾಗರ ತಾಲ್ಲೂಕಿನ ಅಮಗೊಡ್ಲು ಕೃಷ್ಣಾನಂದ ಮಠ ಮತ್ತು ಹೊಸಳ್ಳಿ ಮಠ ಈ ನಾಲ್ಕು ಮಠಗಳೂ ರಾಮಚಂದ್ರಪುರ ಮಠದಲ್ಲಿ ವಿಲೀನವಾದವು. ಮತ್ತು ಇ|| ಸ ೧೮೫೦-೫೧ರಲ್ಲಿ ತೀರ್ಥಹಳ್ಳಿಯಲ್ಲಿ ಅಮರೇಂದ್ರಪುರಿ ಎಂಬುವರಿಗೆ ಇವರೇ ಸನ್ಯಾಸವನ್ನು ಕೊಟ್ಟಿದ್ದರು. ನಂತರ ಇ|| ಸ ೧೮೫೮ ರಲ್ಲಿ ಸದ್ರಿ ಅಮರೇಂದ್ರ ಪುರಿಗಳೆಂಬುವರು, ತೀರ್ಥಹಳ್ಳಿ ಮಠದ ಸರ್ವಾಧಿಕಾರವನ್ನೂ ಇದೇ ರಾಘವೇಂದ್ರಭಾರತಿಗಳಿಗೇ ವಹಿಸಿಕೊಟ್ಟರು. ಅಂದಿನಿಂದ ತೀರ್ಥಹಳ್ಳಿ ಮಠದಲ್ಲಿ ಪ್ರತ್ಯೇಕ ಸನ್ಯಾಸವಾಗಲಿಲ್ಲ. ರಾಮಚಂದ್ರಪುರಮಠದಲ್ಲೇ ವಿಲೀನ ಹೊಂದಿತು.

ವ್ಯವಹಾರದಲ್ಲೂ, ಪರಮಾರ್ಥದಲ್ಲೂ, ಪ್ರವೀಣರಾದ ಈ ಸ್ವಾಮಿಗಳವರು ಸಾಗರ ತಾಲ್ಲೂಕು " ಮೆಳವರಿಗೆ " ಎಂಬ ಹಳ್ಳಿಯಲ್ಲಿ ಮಾಘ ಕೃಷ್ಣ ೧೨ ನೇ ದಿನ ಮುಕ್ತರಾದರು. ಅಲ್ಲಿಯೇ ಇವರ ಸಮಾಧಿಯಿದೆ. ಈಗಲೂ, ಆ ಗ್ರಾಮದವರು ಪೂಜೆ, ವಾರ್ಷಿಕ ಆರಾಧನೆಗಳನ್ನು ನಡೆಸುತ್ತಾರೆ.

೩೨. **ರಾಘವೇಶ್ವರಭಾರತೀ:–** ಇವರೂ ತಮ್ಮ ಪೂರ್ವಿಕರ ಮನೆತನದಿಂದಲೇ ಬಂದವರು. ೧೬ ನೇ ವಯಸ್ಸಿನಲ್ಲೇ ಆಶ್ರಮ ಸ್ವೀಕಾರವಾಯಿತು. ನಂತರ ದಕ್ಷಿಣ ದೇಶದ ತಾಮ್ರಪರ್ಣೀ ತೀರದಲ್ಲಿರುವ ತಿನ್ನವೆಲ್ಲಿ, ಕಾಂಚಿ ಈ ಸ್ಥಳಗಳಲ್ಲಿದ್ದು ತರ್ಕ, ನ್ಯಾಯ, ಉತ್ತರ ಮೀಮಾಂಸಶಾಸ್ತ್ರ, ಹಾಗೂ, ಯೋಗಶಾಸ್ತ್ರಗಳಲ್ಲಿ ವಿಶೇಷಜ್ಞಾನವನ್ನು ಸಂಪಾದಿಸಿ, ತಿರುಗಿ ಮಠಕ್ಕೆ ಬರುವಾಗ ಕಾಂಚೀರಾಜನಿಂದ ದತ್ತವಾದ ಆನೆಯೊಂದನ್ನು ತಂದರು.

ವೈಲಿ ಬೇನೆಯಿಂದ ಇವರ ಒಂದು ಕಣ್ಣು ಹೋಗಿತ್ತು. ಇವರು ಕೊಡಚಾದ್ರಿಯ ಚಿತ್ರಮೂಲದಲ್ಲಿ ಆರುತಿಂಗಳಕಾಲ ಗುಪ್ತವಾಗಿ ತಪಶ್ಚರ್ಯೆ ಮಾಡಿ ತಮ್ಮ ಕಳೆದುಹೋದ ಕಣ್ಣನ್ನು ಪುನಃ ಪಡೆದ ಮಹಾಮಹಿಮರು. ರಾಮಚಂದ್ರಪುರದಲ್ಲಿ ಈಗಿರುವ ಕಲ್ಲಿನಮಠವನ್ನು ಇವರೇ ಕಟ್ಟಿಸಿದರು.

ಒಂದುಸಲ ಇವರು ಸಂಚಾರಹೊರಟಾಗ ಒಂದು ಊರಿನಲ್ಲಿ ಉಳಿದರು. ಅಲ್ಲಿ ಆನೆಗೆ ಮದಪೇರಿ ಕಟ್ಟಿದ ಕಂಬವನ್ನು ಕಿತ್ತೊಗೆದು ತೋಟ ತುಡಿಕೆಗಳನ್ನು ನಾಶಪಡಿಸತೊಡಗಿತು. ಮಾವುತನ ಆಟವೇನೂ ನಡೆಯದೇ ಎಲ್ಲರೂ ಭಯಗ್ರಸ್ತರಾಗಿ ಶ್ರೀ ಸ್ವಾಮಿಗಳವರಲ್ಲಿ ಮೊರೆಹೊಕ್ಕರು. ಆಗ ಸ್ವಾಮಿಗಳವರು ಬಂದು ಆನೆಯ ಸಮೀಪಕ್ಕೆ ಹೋಗಿ " ರಾಮಾ, ಇದೇನು ಅನರ್ಥಮಾಡಿದೆ ? " ಎನ್ನುತ್ತ ತಮ್ಮ ಕೈಯಿಂದ ಸಂಜ್ಞೆ ಮಾಡಲು ಆ ಮತ್ತ ಗಜವು ಅತ್ಯಂತವಿನಯದಿಂದ

ಶ್ರೀಗಳವರ ಹತ್ತಿರಕ್ಕೆ ಬಂದು ನಿಂತಿತು. ಸ್ವಾಮಿಗಳು ಹೊದ್ದ ಕಾವಿಶಾಟಿಯಿಂದ ಸೊಂಡಿಲಿಗೆ ಸುತ್ತಿ ಹಿಡಿದುಕೊಂಡು ಬಂದರು. ಈ ಅದ್ಭುತ ಸಾಮರ್ಥ್ಯವನ್ನು ನೋಡಿ ಎಲ್ಲರೂ ಚಕಿತರಾದರು. ಇವರ ವಾಕ್ಸಿದ್ಧಿಯೂ ಅಮೋಘವಾದ್ದಿತ್ತು.

ಇವರಕಾಲದಲ್ಲಿ ಮಂಗಳೂರು ಪ್ರಾಂತದ ೫೦೦ ಹವ್ಯಕ ಬ್ರಾಹ್ಮಣರ ಮನೆಗಳವರು ಓರ್ವ ಬಹಿಷ್ಕೃತನ ಪಕ್ಷ ಕಟ್ಟಿ, ಈಶ್ವರ ಶಾಸ್ತ್ರಿ ಎಂಬುವನ ಮುಖಂಡತ್ವದಲ್ಲಿ ಈ ಮಠದ ಶಿಷ್ಯತ್ವವನ್ನೇ ತಿರಸ್ಕರಿಸಿ, ಶೃಂಗೇರಿಮಠಕ್ಕೆ ಸೇರಿಕೊಂಡರು. ಆದರೆ ಹೀಗೆ ಶೃಂಗೇರಿಮಠದ ಜ್ಯೇಷ್ಠ ಪರಂಪರೆಯಿಂದ ಬಂದ ಈ ಮಠದ ಶಿಷ್ಯತ್ವವನ್ನು ತ್ಯಜಿಸಿ, ಹೀಗೆ ಅನ್ಯಮಠಕ್ಕೆ ಸೇರುವುದು ನೀತಿಯಲ್ಲ ವೆಂದು ವಿದ್ವತ್ ಸಭೆಯಲ್ಲಿ ತೀರ್ಮಾನಿಸಲ್ಪಟ್ಟಿತು. ಆದರೂ ಈ ಬಗ್ಯೆ ಮದ್ರಾಸು ಹೈಕೋರ್ಟಿನಲ್ಲಿ ವ್ಯಾಜ್ಯ ನಡೆದು ಶೃಂಗೇರಿಮಠಕ್ಕೆ ಸ್ವತಂತ್ರವಾದ ರಾಮಚಂದ್ರಪುರಮಠದ ಆಡಳಿತದಲ್ಲಿ ಕೈಹಾಕುವುದು ಹಕ್ಕಿಗೆ ವ್ಯತಿರಿಕ್ತವಾಗಿದೆ ಎಂದು ಸಿದ್ಧವಾಯಿತು. ನಂತರ ಈ ೫೦೦ ಮನೆಯವರೂ ಶೃಂಗೇರಿ ಮಠದಿಂದ ತಿರಸ್ಕರಿಸಲ್ಪಟ್ಟು ತ್ರಿಶಂಕು ಮಹಾರಾಯರಾಗಿ ಅಭಿನವ ವಿಶ್ವಾಮಿತ್ರನಂತಿದ್ದ ಈಶ್ವರ ಶಾಸ್ತ್ರಿಗೇ ಶರಣು ಬಂದರು. ಈಗ ಈಶ್ವರಶಾಸ್ತ್ರಿಯು ನಿರುಪಾಯ ನಾದನು. ಆಗ ಆ ಎಲ್ಲ ಬ್ರಾಹ್ಮಣ ಮನೆತನದವರೂ ಪಶ್ಚಾತ್ತಾಪಪಟ್ಟು ಕೊಂಡು ಹೀಗೆ ನಾವು ನಿಷ್ಕಾರಣವಾಗಿ ಬಹಿಷ್ಕೃತನನ್ನು ಎತ್ತಿಹಿಡಿದು, ಗುರು ಮಠವನ್ನು ವಿರೋಧಿಸಿ, ಅನೇಕ ಕಷ್ಟನಷ್ಟಗಳಿಗೆ ಗುರಿಯಾಗಿ ಬಹಳ ತಪ್ಪು ಮಾಡಿದಂತಾಯಿತೆಂದು ವಿಚಾರ ಹುಟ್ಟಿತು. ಈಶ್ವರಶಾಸ್ತ್ರಿಯೊಬ್ಬನ ಹೊರತು ಉಳಿದೆಲ್ಲರೂ, ಪುನಃ ಮಠಕ್ಕೆ ತಪ್ಪುದಂಡವನ್ನು ತೆತ್ತು ಸೇರಿಕೊಂಡರು. ಈಶ್ವರಶಾಸ್ತ್ರಿಯು ಸ್ವಲ್ಪಕಾಲದಲ್ಲೇ ಬಹಳವಾದ ಆಪತ್ಯದಿಂದ ಮೃತನಾದನು. ಅವರ ಒಬ್ಬ ಮಗನಿಗೆ ಹುಚ್ಚು ಹಿಡಿಯಿತು. ಇವರ ಕಾಲದಲ್ಲಿ ತೀರ್ಥಹಳ್ಳಿ ಮಠದ ವಿಚಾರದಲ್ಲಿ ಪರಸ್ಪರ ಜಗಳ ಉಂಟಾಗಿ ಸರ್ಕಾರದ ಸ್ವಾಧೀನವಾಗುವ ಸಂಭವಬಂದಿತ್ತು. ಆಗ ಈ ಮಠದ ಶಿಷ್ಯರಾದ ಹೊಸಬಾಳೆ ತಿಮ್ಮಪ್ಪಾ ಹೆಗ್ಗಡೆ ಯವರು ಮತ್ತು ಆ ಕಾಲದಲ್ಲಿ ಅಲ್ಲಿಯ ಏಜಂಟರಾಗಿದ್ದ ಕೊಡ್ಲೆಕೆರೆ ಶಿವರಾಮ ಭಟ್ಟರೂ ಸಹಾ ಬಹಳ ಮುತವರ್ಜಿಯಿಂದ ವ್ಯವಹಾರ ನಡೆಸಿ, ಸದ್ರಿ ಮಠವನ್ನು ಊರ್ಜಿತ ಸ್ಥಿತಿಗೆ ತಂದರು.

ಮಹಾ ತಪೋನಿಧಿಗಳಾದ ಈ ರಾಘವೇಶ್ವರ ಭಾರತಿಗಳು ಶಾ. ಶ. ೧೮೩೧ ನೇ ಕೀಲಕ ಸಂವತ್ಸರದ ಮಾರ್ಗಶಿರ ಶುಕ್ಲ ೫ನೇ ದಿನ ಗೋಕರ್ಣದ ರಘೂತ್ತಮ ಮಠದಲ್ಲೇ ಪರಂಧಾಮವನ್ನೈದಿದರು. ಅಲ್ಲಿಯೇ ಅವರ ಸಮಾಧಿಯಾಯಿತು.

೩೩. ರಾಮಚಂದ್ರಭಾರತೀ:– ಇವರು ಶ್ರೀ ಕ್ಷೇತ್ರ ಗೋಕರ್ಣದ ಪ್ರಸಾದ ಭಟ್ಟರ ಮನೆತನದಲ್ಲಿ ವೃಷ ಸಂವತ್ಸರದಲ್ಲಿ ಜನ್ಮವೆತ್ತಿದ್ದರು. ಇವರಿಗೆ ವಿಳಂಬಿ ಸಂವತ್ಸರದಲ್ಲಿ ತಾರೀಖು ೧೪–೮–೧೯೯೮ ರಲ್ಲಿ ಆಶ್ರಮ ದೀಕ್ಷೆಯಾಯಿತು. ಕೆಕ್ಕಾರಿನ ರಘೂತ್ತಮ ಮಠದಲ್ಲಿ ಆಶ್ರಮವನ್ನು ಸ್ವೀಕರಿಸಿ, ನಂತರ ತಮ್ಮ ದೀಕ್ಷಾ ಗುರುಗಳಿಂದಲೇ ತರ್ಕ ನ್ಯಾಯ ಶಾಸ್ತ್ರಗಳನ್ನು ಮಠದಲ್ಲೇ ಅಭ್ಯಾಸಿಸಿ ಪಾಂಡಿತ್ಯವನ್ನು ಪಡೆದರು.

ಇವರು ಒಳ್ಳೇ ವಾಗ್ಮಿಗಳು. ವ್ಯವಹಾರ ಕುಶಲರು, ಸುಪ್ರಸಿದ್ಧವಾದ ಹಸ್ತಿ ದಂತದ ಸಿಂಹಾಸನವು ಇವರ ಕಾಲದಲ್ಲೇ ತಯಾರಾಯಿತು. ಮಠದ ಅಧಿಕಾರಿಗಳಲ್ಲಿ ಪ್ರಮುಖರಾದ ಸೊರಬದ ತಾಲ್ಲೂಕು ಹೊಸಬಾಳೆ ಪುಟ್ಟಪ್ಪ, ಸಹೋದರರು ವಿಶೇಷ ಮುತುವರ್ಜಿ ವಹಿಸಿ, ಮೂಡುಗೋಡು ಗುಡಿಗಾರ ಹಿರಣ್ಯಪ್ಪನೆಂಬ ಕಲಾಚತುರನಿಂದ ಈ ಸುಂದರ ಸಿಂಹಾಸನವನ್ನು ತಯಾರಿಸಿ ದ್ದಾರೆ. ಹಿರಣ್ಯಪ್ಪನು ತನ್ನ ಕಲಾನೈಪುಣ್ಯವನ್ನೆಲ್ಲಾ ಇದರಲ್ಲಿ ತೋರಿಸಿದ್ದಾನೆ. ಸಿಂಹಾಸನವು ದರ್ಶನೀಯವಾಗಿದೆ. ಸುಮಾರು ೧೮ ವರ್ಷಗಳಕಾಲ ಹಲವು ಕಲಾವಿದರು ಇದರಲ್ಲಿ ಕೆಲಸ ಮಾಡಿರುವರು.

ಈ ಸ್ವಾಮಿಗಳವರೂ ಒಳ್ಳೆ ತಪೋನಿಷ್ಠರಿದ್ದರು. ಒಂದುಸಲ ಒಂದು ಗ್ರಾಮದ ಎಲ್ಲ ಜನರೂ ಒಗ್ಗಟ್ಟಿನಿಂದ ಮಠಕ್ಕೆ ಎಷ್ಟೋ ವರ್ಷಗಳಿಂದ ಕಾಣಿಕೆ ಕೊಡದೆ ತಿರಸ್ಕಾರ ಬುದ್ಧಿಯಿಂದ ಇದ್ದರು. ಆಮೇಲೊಂದು ದಿನ ಆ ಕಡೆ ಸಂಚಾರಕ್ಕೆ ಹೋದಾಗ ಅಲ್ಲಿನ ಎಲ್ಲ ಶಿಷ್ಯರಿಗೂ ಹೇಳಿಕಳುಹಿಸಿದರು. ಒಬ್ಬರೂ ದರ್ಶನಕ್ಕೆ ಬಾರದಿರಲು ಸ್ವಾಮಿಗಳವರೇ ಅಲ್ಲಿಗೆ ಹೊರಟರು. ಆಗ ಆ ಊರಿನವ ರೆಲ್ಲರೂ, ತಮ್ಮ ತಮ್ಮ ಮನೆಯ ಬಾಗಿಲುಗಳನ್ನು ಭದ್ರವಾಗಿ ಹಾಕಿಕೊಂಡು ಮನೆಗೊಬ್ಬರಂತೆ ಹೊರಗಡೆ ನಿಂತು "ಸ್ವಾಮಿಗಳೇ ನಮ್ಮೂರಿಗೆ ಪ್ರವೇಶಿಸಬೇಡಿರಿ; ಹಿಂತಿರುಗಿರಿ" ಎಂದು ಹೇಳಿದರು. ಈ ರೀತಿಯಾದ ಇವರ ತಿರಸ್ಕಾರವನ್ನು ಕಂಡು ಸ್ವಾಮಿಗಳವರು ಮನಸ್ಸಿನಲ್ಲಿ ಬಹಳವಾಗಿ ನೊಂದುಕೊಂಡು ತಮ್ಮ ಜೊತೆಯ ಜನರೊಂದಿಗೆ ಹಿಂದಿರುಗಿದರು. ಸಾಯಂಕಾಲವಾಗುತ್ತ ಬಂದಿತ್ತು; ಯಾವುದಾದರೂ ಒಂದುಮರದ ಕೆಳಗೇ ಉಳಿಯುವ ನಿಶ್ಚಯಮಾಡಿದರು. ಸ್ವಾಮಿಗಳು "ಈ ದಿನ ಪಟ್ಟಾಭಿರಾಮನಿಗೆ ಆ ಊರು ಪ್ರವೇಶಮಾಡಲು ಇಷ್ಟವಿರಲಿಲ್ಲವೆಂದು ಕಾಣುತ್ತದೆ; ಅವನಿಗೆ ವನವಾಸವೆಂದರೆ ಬಹಳ ಪ್ರೀತಿಇರಬೇಕು" ಎಂದು ಹಾಸ್ಯಮಾಡಿದರು. ಆದರೆ ಪೂರ್ವದಿನ ತನ್ನ ಮನೆಯಲ್ಲಿಟ್ಟುಕೊಂಡ ಸದ್ಗೃಹಸ್ಥನು ಆಗ್ರಹದಿಂದ ತನ್ನ ಮನೆಗೇ ಕರೆದೊಯ್ದನು. ಈಘಟನೆಯ ನಂತರ ಕೆಲವೇ ವರ್ಷಗಳಲ್ಲಿ ಆ ಊರಿನ

ಎಲ್ಲ ಮನೆಗಳಲ್ಲೂ ಕೇವಲ ಪುತ್ರಹೀನರಾದ ವಿಧವೆಯರು ಮತ್ತು ಮುದುಕರು ಮಾತ್ರ ಉಳಿದರು. ವಂಶಕ್ಕೊಬ್ಬರೂ ಉಳಿಯದಂತೆ ಬಾಕಿ ಎಲ್ಲರೂ ಮೃತರಾದರು. ನಂತರ ಕೆಲವು ವರ್ಷಗಳ ವರೆಗೆ ಕೆಲವು ದತ್ತಕ, ಕೆಲವು ದೌಹಿತ್ರ ಸಂತತಿಯೇ ನಡೆಯಿತು. ಕೆಲವು ಕಾಲಾನಂತರದಲ್ಲಿ ಈ ಊರಿನ ಸ್ಥಿತಿಯನ್ನು ಅರಿತು ಈಚಿನವರು ಪಶ್ಚಾತ್ತಾಪಪಟ್ಟು ಗುರುಗಳಲ್ಲಿ ಕ್ಷಮಾಯಾಚನೆಮಾಡಿದ್ದಲ್ಲದೆ ಸವಾರಿಯನ್ನು ಊರಿಗೆ ಕರೆದೊಯ್ದು ಭಿಕ್ಷ, ಸಮಾರಾಧನೆ ನಡೆಸಿದರಂತೆ.

ಇವರು ಮಾತಿನಲ್ಲಿ ಕೊಂಚ ಉಗ್ರರಾಗಿ ತೋರುತ್ತಿದ್ದರು. ಹೃದಯದಲ್ಲಿ ಅತ್ಯಂತ ಕೋಮಲರು, ವಿದ್ವಜ್ಜನರಲ್ಲಿ ವಿಶ್ವಾಸವುಳ್ಳವರು. ತಮ್ಮ ಕೈ ಕೆಳಗಿನ ಮಠದ ನೌಕರರ ಬಗ್ಯೆ ವಿಶೇಷ ಕೃಪಾದೃಷ್ಟಿಯುಳ್ಳವರು. ಸ್ವಾಮಿನಿಷ್ಠ ಸೇವಕರ ಬಗ್ಯೆ ತುಂಬಾ ಅಭಿಮಾನವುಳ್ಳವರಾಗಿದ್ದು, ಸ್ವತಃ ತಾವೂ ಅವರ ಹೇಳಿಕೆಗೆ ವಿಧೇಯರಾಗಿ ನಡೆದುಕೊಳ್ಳಲು ಹಿಂದು ಮುಂದು ನೋಡುತ್ತಿರಲಿಲ್ಲ. ಒಂದು ಸಲ ಹಸ್ತಿದಂತದ ಸಿಂಹಾಸನ ಪ್ರದರ್ಶನವು ನಡೆದಾಗ ಮಠದಲ್ಲಿ ಹಲವು ವರ್ಷಗಳಿಂದ ಒಳ್ಳೇ ನಿಷ್ಠೆಯಿಂದ ಕರ್ತವ್ಯ ದಕ್ಷತೆ ವಹಿಸುತ್ತಿದ್ದ ಬಿ. ಲಕ್ಷ್ಮಣರಾವ್ ಎಂಬ ಸಾರಸ್ವತರು ಈ ಬಹು ಮೂಲ್ಯ ಸಿಂಹಾಸನದ ಕಾವಲಿಗಿದ್ದರು. ಬಹು ಬೆಲೆಯುಳ್ಳ ಹಸ್ತಿ ದಂತ ಹಾಗೂ ಬಂಗಾರದಿಂದ ನಿರ್ಮಿತವಾದ ಈ ಸುಂದರ ಕಲಾಪೂರ್ಣ ಚಿತ್ರಮಯವಾದ ಸಿಂಹಾಸನವನ್ನು ನೋಡಲು ನಿತ್ಯವೂ ಸಾವಿರಾರು ಸ್ತ್ರೀ ಪುರುಷರು ಬಂದು ಹೋಗುತ್ತಿದ್ದರು. ಮಠದ ನೌಕರರಲ್ಲೆಲ್ಲಾ ಅತ್ಯಂತ ಪ್ರಾಮಾಣಿಕರಾದ ಲಕ್ಷ್ಮಣರಾಯರು ಯಾರನ್ನೂ ಕೈಯಿಂದ ಮುಟ್ಟಗೊಡುತ್ತಿರಲಿಲ್ಲ. ಒಂದು ದಿನ ಸ್ವತಃ ರಾಮಚಂದ್ರಭಾರತೀ ಸ್ವಾಮಿಗಳವರೇ ತಮ್ಮ ಕೆಲವು ಚಿರಪರಿಚಿತರಾದ ವಿದ್ವಾಂಸರಿಗೆ ಸಿಂಹಾಸನದ ಪ್ರತಿಯೊಂದು ಭಾಗದ ವೈಶಿಷ್ಟ್ಯ, ವಿಗ್ರಹದ ಸೌಂದರ್ಯ ಮುಂತಾದವನ್ನು ಎತ್ತಿ ತೋರಿಸುವಾಗ ಯಾವುದೋ ಒಂದು ಚಿತ್ರದ ಕಡೆಗೆ ಕೈಯಿಟ್ಟು ತೋರಿಸಲು ಕೈ ಮುಂದೆಮಾಡಿದರು. ಆಗ ಲಕ್ಷ್ಮಣರಾಯರು ಕೈ ಅಡ್ಡಹಾಕಿ " ಮುಟ್ಟಬೇಡಿ, ಕೈ ಹಿಂದಕ್ಕೆ ತೆಗೆಯಿರಿ " ಎಂದು ಗದರಿಸಿಬಿಟ್ಟರು. ಸಂಗಡ ಇದ್ದ ವಿದ್ವಾಂಸರು ಮನಸ್ಸಿನಲ್ಲೇ " ಅಬ್ಬ! ಸ್ವತಃ ಸ್ವಾಮಿಗಳಿಗೆ ಮುಟ್ಟಬೇಡಿರೆನ್ನುವ ಇವನೆಷ್ಟು ಉದ್ಧಟನು " ಎಂದುಕೊಂಡರು. ಈ ಅಭಿಪ್ರಾಯವನ್ನು ತಿಳಿದ ಸ್ವಾಮಿಗಳು " ನಿನ್ನ ಈ ನಿಷ್ಠೆಗೆ ನಾನು ಮೆಚ್ಚಿದೆ ಲಕ್ಷ್ಮಣ! ಯಾರೂ ಮುಟ್ಟಕೂಡದೆಂಬ ಈ ನಿಯಮವು ನನಗೂ ಅನ್ವಯಿಸುತ್ತದೆ. ಈ ನನ್ನ ಕರ್ತವ್ಯವನ್ನು ಮರೆತ ನನಗೆ ಎಚ್ಚರಿಕೆಯನ್ನಿತ್ತಿ " ಎಂದು ತಮ್ಮ ಸಂತೋಷವನ್ನು ವ್ಯಕ್ತ ಮಾಡಿದರು. ಈಮಠಕ್ಕೆ ಪೂರ್ವದಿಂದಲೂ ವಿಶೇಷವಾಗಿ ಸೊರಬ ತಾಲ್ಲೂಕು ಹೊಸಬಾಳೆ



ಶ್ರೀಮದ್ರಾಮಚಂದ್ರ ಭಾರತೀ ಸ್ವಾಮಿಗಳವರ ಸಿಂಹಾಸನಾರೋಹಣ.

ಸರ್ವಧಾರಿ ಸಂ॥ ರದ ಮಾಘ ಬ॥ ೩೦. ( ತಾರೀಕು 27-2-1949.)

ಮನೆತನದವರು ಮತ್ತು ಮಂಗಳೂರು ಹೋಬಳಿ ಚಕ್ರಕೋಡಿ ಶಾಸ್ತ್ರಿಗಳವರ ಮನೆತನದವರೂ, ಸಹ ಶ್ರೀ ಸಂಸ್ಥಾನಕ್ಕೆ ಹೆಚ್ಚಿನ ಆಸಕ್ತಿಯಿಂದ ಸಹಾಯಕ ರಾಗಿರುತ್ತಾರೆಂತ ಆಗಾಗ್ಯೆ ಅಪ್ಪಣೆಕೊಡಿಸುತ್ತಿದ್ದರು.

ಇವರು ಅನೇಕ ಜನ ಶಿಷ್ಯರ ಆಗ್ರಹಕ್ಕಾಗಿ ಇಸ್ವಿ ಸ೯ ೧೯೪೯ನೇ ಸರ್ವಧಾರಿ ಸಂ|| ರದ ಮಾಘ ಬ|| ೩೦ ರಲ್ಲಿಗೋಕರ್ಣದ ಶ್ರೀಮಹಾಬಲೇಶ್ವರ ಸನ್ನಿಧಾನದಲ್ಲಿ ನಾನಾದೇಶದ ಜನ ಸಮ್ಮುಖದಲ್ಲಿ ವಿಧಿವತ್ತಾಗಿ ಸಿಂಹಾಸನಾರೋಹಣ ಮಾಡಿದರು. ಅದೇ ಫಾಲ್ಗುಣ ಶು||೧೫ ನೇ ದಿನ ಕೆಕ್ಕಾರಿನ ಶ್ರೀ ರಘೂತ್ತಮಮಠದಲ್ಲಿ ಪರಂಧಾಮ ವನ್ನೈದಿದರು. ಎಲ್ಲ ಸ್ವಾಮಿಗಳಂತೆ ಇವರೂ ತಮ್ಮ ನಿರ್ಯಾಣಕ್ಕೆ ಕೆಲವು ಕಾಲ ಮುಂಚೆಯೇ ಈಗಿರುವ ಶ್ರೀಮದ್ರಾಘವೇಂದ್ರಭಾರತೀ ಸ್ವಾಮಿಗಳವರಿಗೆ ಆಶ್ರಮ ದೀಕ್ಷೆಯನ್ನು ಕೊಟ್ಟು, ಪೀಠಾಧಿಪತ್ಯವನ್ನು ವಹಿಸಿದ್ದರು.

೩೪. **ರಾಘವೇಂದ್ರಭಾರತೀ ಸ್ವಾಮಿಗಳವರು:-** ( ವರ್ತಮಾನ ) ಮುಕ್ತರಾದ ರಾಮಚಂದ್ರ ಭಾರತೀ ಸ್ವಾಮಿಗಳ ಕಾಲದ ಕೊನೆಯ ಇಪ್ಪತ್ತೈದು ವರ್ಷಗಳ ಕಾಲದಲ್ಲಿ ಶಿಷ್ಯವರ್ಗವು ( ಹವ್ಯಕ ಜನಾಂಗ ) ಬಹಳ ಶೋಚನೀಯ ಸ್ಥಿತಿಯಲ್ಲಿತ್ತು. ಸುಮಾರು ಸ೯ ೧೯೨೦ ನೇ ಇಸವಿಯಿಂದಲೂ ಧಾರಣೆ ವಾಸಿಗಳೆಲ್ಲಾ ತೀರಾ ಕುಸಿದುಬಿತ್ತು. ಅಡಕೆಯ ತೋಟವೇ ಪ್ರಧಾನ ಜೀವನೋಪಾಯ ವಾಗುಳ್ಳ ಹವ್ಯಕ ಸಮಾಜದ ಮೇಲೆ ಅಡಕೆಯ ಧಾರಣೆಯ ದುಸ್ಥಿತಿಯು ಅತಿ ಪ್ರಬಲವಾದ ಆರ್ಥಿಕ ಆಘಾತವನ್ನುಂಟುಮಾಡಿತು. ಮತ್ತು ಈ ಮಧ್ಯಕಾಲದ ರಾಷ್ಟ್ರೀಯ ಚಳುವಳಿಯ ಪರಿಣಾಮವೂ, ಈ ಬ್ರಾಹ್ಮಣ ಜನಾಂಗದ ಮೇಲೆ ಆಗದೇ ಉಳಿಯಲಿಲ್ಲ. ಈ ಚಳವಳಿಯಿಂದ ಸಮಷ್ಟಿ ರಾಷ್ಟ್ರಕ್ಕೆ ಸತ್ಪರಿಣಾಮ ಉಂಟಾದರೂ, ಕೆಲವು ವ್ಯಷ್ಟಿ ಸಮಾಜಕ್ಕೆ ದುಷ್ಪರಿಣಾಮವೂ ಉಂಟಾಗಿದೆ ಎಂಬುದು ನಿರ್ವಿವಾದ. ಈ ಚಳವಳಿಗೆ ಸಿರಸಿ, ಸಿದ್ದಾಪುರ, ಮೈಸೂರಿನ ಸೊರಬ, ಸಾಗರ ತಾಲ್ಲೂಕುಗಳಲ್ಲಿ ಪ್ರಧಾನವಾಗಿ ಈಜನಾಂಗವೇ ಆಶ್ರಯನೀಡಿತ್ತು. ಆರ್ಥಿಕ ಹೀನಸ್ಥಿತಿಯ ಜೊತೆಗೇ ಧಾರ್ಮಿಕ ಅಶ್ರದ್ಧೆ, ವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರ, ಗುರುತ್ವದಲ್ಲಿ ಭಯಭಕ್ತಿಗಳ ಅಭಾವ, ಸುಧಾರಣೆಯ ನೆವದಲ್ಲಿ ಹಳೆಯದನ್ನೆಲ್ಲಾ ಕಿತ್ತುಹಾಕುವ ಮನೋವೃತ್ತಿ ಈ ಮುಂತಾದವುಗಳು ಇತರೆಲ್ಲ ಸಮಾಜದಂತೆ ಈ ಸಮಾಜದಲ್ಲೂ ಮೂಡಿತು. ತತ್ಪರಿಣಾಮವಾಗಿ ಗುರುಮಠಗಳಮೇಲೆ ವಿಶೇಷ ಅಪಪ್ರಚಾರವೂ, ಅಶ್ರದ್ಧೆಯೂ, ಕೆಲವರಿಗೆ ತಿರಸ್ಕಾರ ಬುದ್ಧಿಯೂ ಹುಟ್ಟಿತು. ಇದಕ್ಕೆ ಕೆಲವಂಶದಿಂದ ಗುರು ಮಠಗಳ ಔದಾಸೀನ್ಯ, ಕೆಲವು ಮಠಾಧಿಕಾರಿಗಳ ಅತ್ಯಾಚಾರಗಳೂ, ಕಾರಣವಾಗಿದ್ದವು.

ಅಂತೂ ಈ ಎಲ್ಲ ಕಾರಣಗಳಿಂದ ಗುರು-ಶಿಷ್ಯ ಅಥವಾ ಮಠ-ಸಮಾಜಗಳ ಪರಸ್ಪರ ಸೌಹಾರ್ದಭಾವವು ಕಡಿಮೆಯಾಗಿ ಸಂಶಯ ಮತ್ತು ಔದಾಸೀನ್ಯ ದೃಷ್ಟಿ ಹೆಚ್ಚಿತ್ತು. ಕಾಣಿಕೆಹಣ ಮುಂತಾದ್ದು ವಸೂಲಾಗದೇ ನಿಂತಿತು. ಸಾಮಾಜಿಕ ಕಲ್ಯಾಣ ದೃಷ್ಟಿಯಿಂದ ಅವಶ್ಯಕವಾದ ಬಹಿಷ್ಕಾರ ವೊದಲಾದ ಧಾರ್ಮಿಕ ಕಟ್ಟು ಕರಾರುಗಳು ಮುರಿಯಲ್ಪಟ್ಟವು. ಇಂಥ ಪರಿಸ್ಥಿತಿಯಲ್ಲಿ ಮಠಕ್ಕೆ ಮುಂದಿನ ಶಿಷ್ಯಪಟ್ಟವಾಗಬೇಕೋ ಬೇಡವೊ ಎಂಬ ಸಂಶಯ ಉತ್ಪನ್ನವಾಗಿತ್ತು.

ಆ ಸಮಯದಲ್ಲಿ ಶ್ರೀ ರಾಮಚಂದ್ರಭಾರತೀ ಸ್ವಾಮಿಗಳವರು ಹೊನ್ನಾವರ ತಾಲ್ಲೂಕು ಕರ್ಕಿ ಗ್ರಾಮದಲ್ಲಿ ಸ್ವಭಾನು ಸಂವತ್ಸರದ ವೈಶಾಖ ಶು|| ೨ ರಲ್ಲಿ (ಸ್ರ 1943) ಎಲ್ಲಾ ಪ್ರಾಂತ್ಯದ ಶಿಷ್ಯಮಂಡಳಿಯನ್ನೂ ಕರೆಸಿ, ಶಿಷ್ಯಪರಿಗ್ರಹದ ಬಗ್ಯೆ ಸಮಾಲೋಚನೆ ನಡೆಸಿದರು. ಆಗ ಶಿಷ್ಯಪರಿಗ್ರಹವಾಗಲೇಬೇಕೆಂಬ ಸರ್ವಾನುಮತದಿಂದ ನಿರ್ಣಯವಾಯಿತು. ಮತ್ತೂ ಆಬಗ್ಯೆ ಎಲ್ಲಾ ಸೀಮೆಗಳಿಂದಲೂ ಚುನಾಯಿಸಿ ೯ ಜನಗಳ ಒಂದು ಕಮಿಟಿಯನ್ನು ರಚಿಸಲಾಯಿತು. ಸದರಿ ಕಮಿಟಿಯವರು ಎಲ್ಲಾ ಕಡೆಗಳಿಂದಲೂ ವಟುಗಳನ್ನು ಚುನಾಯಿಸಿ, ಜಾತಕಾದಿಗಳನ್ನು ತರಿಸಿ ಪರಿಶೀಲಿಸಿ, ಯಾರಲ್ಲಿ ವಿಶೇಷ ಜ್ಞಾನವೈರಾಗ್ಯಾದಿ ಗುಣಗಳು ತೋರುತ್ತವೆಯೋ ಅಂಥ ಎರಡು ವಟುಗಳನ್ನು ಚುನಾಯಿಸಿ ಶ್ರೀ ಸಂಸ್ಥಾನಕ್ಕೆ ಬಿನ್ನವಿಸಿಕೊಳ್ಳಬೇಕೆಂದೂ, ಆಪೈಕಿ ಶ್ರೀಗಳವರ ಅಭಿಪ್ರಾಯದಂತೆ ಒಬ್ಬರಿಗೆ ಆಶ್ರಮ ಕೊಡಿಸಬೇಕಾಗಿಯೂ ತೀರ್ಮಾನವಾಯಿತು.

ನಂತರ ಸದರಿ ಕಮಿಟಿಯವರು ಎಲ್ಲಾ ಕಡೆಗೂ ಪ್ರಚಾರಮಾಡಿ, ಎಂಟು ಜಾತಕಗಳನ್ನು ತಂದು ಪರಿಶೀಲನೆ ನಡೆಸಿ, ಆಪೈಕಿ ಎರಡು ವಟುಗಳ ಜಾತಕ ಪರಿಚಯವನ್ನು ತಾರಣ ಸಂವತ್ಸರದ ಕಾರ್ತೀಕ ಬಹುಳದಲ್ಲಿ ರಾಮಚಂದ್ರಪುರಮಠದಲ್ಲಿ ಶ್ರೀ ಸನ್ನಿಧಾನದಮುಂದೆ ಸಭೆಸೇರಿ ಬಿನ್ನವಿಸಿಕೊಂಡರು. ಸದರಿ ಸಭೆಯಲ್ಲಿ ಸದರಿ ಆಶ್ರಮ ಸ್ವೀಕಾರ ಸಮಾರಂಭವನ್ನು ರಾಮಚಂದ್ರಪುರಮಠದಲ್ಲಿ ನಡೆಸಬೇಕಾಗಿಯೂ, ಇದರ ಖರ್ಚಿನ ಬಗ್ಯೆ ಸುಮಾರು ಇಪ್ಪತ್ತುಸಾವಿರ ರೂಪಾಯಿ ಬೇಕಾಗಬಹುದಾಗಿಯೂ, ಆ ಬಗ್ಗೆ ಉತ್ತರ ಕನ್ನಡ ಸೀಮೆಯಿಂದ ಐದು ಸಾವಿರ ರೂಪಾಯಿಗಳನ್ನೂ, ದಕ್ಷಿಣ ಕನ್ನಡ ಸೀಮೆಯಿಂದ ಐದುಸಾವಿರರೂಪಾಯಿಗಳನ್ನೂ, ಮೈಸೂರು ಸೀಮೆಯ ಸಾಗರ, ಸೊರಬ, ಹೊಸನಗರ ತಾಲ್ಲೂಕಿನಿಂದ ಐದುಸಾವಿರ ರೂಪಾಯಿಗಳನ್ನೂ, ಶ್ರೀಮಠದಿಂದ ಐದುಸಾವಿರ ರೂಪಾಯಿಗಳನ್ನೂ, ( ಎಂದರೆ ದವಸ, ಅಲ್ಲಿಯ ಕಾಮಗಾರಿಗಳಿಂದ ) ಕೊಡುವುದೆಂತಲೂ, ತೀರ್ಮಾನವಾಯಿತು. ಮತ್ತು ಸದರಿ ಕಾರ್ಯವನ್ನು ಆದಷ್ಟು ಜಾಗ್ರತೆ ನಡೆಸುವಂತೆಯೂ ನಿರ್ಣಯಿಸಲಾಯಿತು.



ಶ್ರೀಗಳವರು ಪೂಜೆಯಲ್ಲಿರುವುದು

ನಂತರ ಪಾರ್ಥಿವ ಸಂವತ್ಸರದ ವೈಶಾಖ ಶು|| ಸಪ್ತಮಿ, ಶುಕ್ರವಾರ (ತಾ|| ೧೮-೫-೪೫)ದಲ್ಲಿ ಶ್ರೀ ರಾಮಚಂದ್ರಪುರಮಠದಲ್ಲಿ ಈಗ ಇರುವ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರ ಶಿಷ್ಯ ಪರಿಗ್ರಹ ಪೂರ್ವಕ ಆಶ್ರಮ ಸ್ವೀಕಾರವೂ, ಅದೇ ದಶಮಿಯ ದಿನ ಮಠಾಧಿಪತ್ಯಕ್ಕೆ ಪಟ್ಟಾಭಿಷೇಕ ಮಹೋತ್ಸವವೂ, ಶಾಸ್ತ್ರೀಯವಾಗಿ ಅತಿ ವಿಜೃಂಭಣೆಯಿಂದ ಒಂದು ವಾರದ ವರೆಗೂ ನಡೆಯಿತು.

ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರು ಸಾಗರ ತಾಲ್ಲೂಕು ಕರೂರು ಸೀಮೆಯ "ಮಾಗಲು" ಎಂಬ ಗ್ರಾಮದ ವಿಪ್ರೋತ್ತಮರಾದ ಬ್ರಂ|| ಶ್ರೀ|| ಗಣಪತಿಭಟ್ಟರು ಎಂಬುವರ ಪುತ್ರರು. ಶ್ರೀ|| ಗಣಪತಿಭಟ್ಟರು ಯಜುಃಶಾಖೆಯ ಬೋಧಾಯನ ಸೂತ್ರದ ವಸಿಷ್ಠ ಗೋತ್ರದವರಾಗಿದ್ದು, ಕ್ರಮಾಂತ ಅಧ್ಯಯನ ಸಂಪನ್ನರೂ, ಸಂಸ್ಕೃತಜ್ಞರೂ, ಶ್ರೀ ಗಣಪತಿ, ಚಂಡಿಕಾ ಉಪಾಸಕರೂ ಆಗಿದ್ದರು. ಇಂಥವರಲ್ಲಿ ಉದ್ಭವಿಸಿದ ಪ್ರಕೃತ ಶ್ರೀಗಳವರನ್ನು, ಶ್ರೀ ರಾಮಚಂದ್ರ ಭಾರತೀ ಸ್ವಾಮಿಗಳವರೂ ಮತ್ತು ಶಿಷ್ಯ ಪ್ರಮುಖರೂ ಚುನಾಯಿಸಿದ್ದಕ್ಕೆ ತಮ್ಮ ಪುತ್ರರ ವೈರಾಗ್ಯ ಪ್ರವೃತ್ತಿಯನ್ನರಿತಿದ್ದ ಆಸ್ತಿಕ ದಂಪತಿಗಳು ಧರ್ಮ ವಿಶ್ವಾಸದಿಂದ ಅರ್ಪಿಸಿದರು.

ಶ್ರೀಗಳವರ ಪ್ರಾರಂಭಿಕ ವೇದಾಧ್ಯಯನ, ಸಂಸ್ಕೃತವು ಇವರ ತೀರ್ಥರೂಪುಗಳವರಾದ ವೇ|| ಗಣಪತಿಭಟ್ಟರಿಂದಲೇ ಪ್ರಾರಂಭವಾಗಿದ್ದು ನಂತರ ತಂಜಾವೂರು, ನಂಜನಗೂಡು ಪಾಠಶಾಲೆಗಳಲ್ಲಿ ಅಧ್ಯಯನ ನಡೆಸಿದ್ದರು. ನಂತರ ಆಶ್ರಮಸ್ವೀಕಾರವಾಯಿತು. ಆಮೇಲೆ ಶ್ರೀರಾಮಚಂದ್ರಪುರಮಠದಲ್ಲಿಯೇ ಗುರುಗಳಾದ ಶ್ರೀಮದ್ರಾಮಚಂದ್ರ ಭಾರತೀ ಸ್ವಾಮಿಗಳವರಿಂದ ಆಶ್ರಮ ಧರ್ಮ ವಿದ್ಯಾಭ್ಯಾಸ ಮತ್ತು ಮಠೀಯ ವ್ಯವಹಾರ ಪರಿಚಯವನ್ನು ಪಡೆದರು.

ನಂತರ ಸ್ವಲ್ಪ ಕಾಲದಲ್ಲಿ ಶ್ರೀ ರಾಮಚಂದ್ರ ಭಾರತೀ ಸ್ವಾಮಿಗಳವರು ಕಾಶೀಕ್ಷೇತ್ರಕ್ಕೆ ಚಿತ್ತೈಸಿದರು. ಅಲ್ಲಿಯ ವಿದ್ಯಾಭ್ಯಾಸದ ಕ್ರಮವನ್ನೂ, ಪಂಡಿತರ ಯೋಗ್ಯತೆಯನ್ನೂ ನೋಡಿ ತಮ್ಮ ಶಿಷ್ಯರಾದ ಶ್ರೀಗಳವರನ್ನು ಕರೆಸಿಕೊಂಡು ರಾಮ ಘಾಟದಲ್ಲಿಯ ವೀರೇಶ್ವರ ಕೃಷ್ಣ ಯಜುರ್ವೇದ ಪಾಠಶಾಲೆಯಲ್ಲಿ ವಿಶೇಷ ವಿದ್ಯಾಭ್ಯಾಸಕ್ಕೆ ಯೋಗ್ಯ ವ್ಯವಸ್ಥೆ ಮಾಡಿಸಿ, ತಿರುಗಿ ಸ್ವಸ್ಥಾನಕ್ಕೆ ದಯಮಾಡಿಸಿದರು. ಆಮೇಲೆ ಸರ್ವಧಾರಿ ಸಂವತ್ಸರದ ಫಾಲ್ಗುಣ ಶು|| ೧೫ ರಲ್ಲಿ ಶ್ರೀ ರಾಮಚಂದ್ರ ಭಾರತೀ ಸ್ವಾಮಿಗಳವರು ಮುಕ್ತರಾದ ಸಂಗತಿಯನ್ನು ತಿಳಿದು

ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರು ಕೆಕ್ಕಾರು ಮಠಕ್ಕೆ ದಯಮಾಡಿಸಿದರು. ನಂತರ ಆರಾಧನಾಕ್ರಮವನ್ನು ಸಶಾಸ್ತ್ರೀಯವಾಗಿ ಭಕ್ತಿ ಶ್ರದ್ಧಾನ್ವಿತ ಶಿಷ್ಯ ಸಂದೋಹದ ಸಹಕಾರದಿಂದ ನೆರವೇರಿಸಿದರು. ಸದ್ಯದಲ್ಲೇ ಶ್ರೀರಾಮ ಜಯಂತಿ ಬಂದುದರಿಂದ ಕೆಕ್ಕಾರು ಮಠದಲ್ಲೇ ಇದ್ದು ರಥೋತ್ಸವವನ್ನು ಮುಗಿಸಿ, ಗೋಕರ್ಣ ಕ್ಷೇತ್ರಕ್ಕೆ ಚಿತ್ತೈಸಿದರು. ಅಲ್ಲಿಯ ಪದ್ಧತಿಯಂತೆ ಉತ್ಸವದೊಡನೆ ಶ್ರೀ ರಘೂತ್ತಮ ಮಠಕ್ಕೆ ದಯಮಾಡಿಸಿ, ಅಲ್ಲಿ ಶ್ರೀ ಗುರು ಮೂರ್ತಿ ಮತ್ತು ಶ್ರೀ ದೇವರುಗಳ ದರ್ಶನಮಾಡಿ, ಕೆಲವು ದಿವಸಗಳಿದ್ದು ಶ್ರೀರಾಮಚಂದ್ರಪುರ ಮಠಕ್ಕೂ, ತೀರ್ಥಹಳ್ಳಿ ಮಠಕ್ಕೂ ಚಿತ್ತೈಸಿ, ಅಲ್ಲಿಯೂ, ಕೆಲವು ದಿನಗಳಿದ್ದರು.

ನಂತರ ವಿದ್ಯಾಭ್ಯಾಸದ ಉತ್ಕಟೇಚ್ಛೆಯಿಂದ ಪುನಃ ಕಾಶಿಗೆ ಹೋಗುವಾಗ ಮಠಗಳ ಆಡಳಿತೆ ಬಗ್ಗೆ ಶಿಷ್ಯ ಪ್ರಮುಖರ ಸಮಿತಿಯೊಂದನ್ನು ನಿಯಮಿಸಿ, ಸಮಿತಿ ಅಧ್ಯಕ್ಷತೆಯನ್ನು ಸೊರಬ ತಾಲ್ಲೂಕು ಹೊಸಬಾಳೆ ಸುಬ್ಬರಾಯರಿಗೆ ವಹಿಸಿ, ವಿರೋಧಿ ಸಂವತ್ಸರದ ಆಷಾಢ ಶುದ್ಧ ೨ ರಲ್ಲು ಶ್ರೀ ಕಾಶೀ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಶ್ರೀ|| ಸುಬ್ಬರಾಯರು ಇವರ ಪೂರ್ವಿಕರಂತೆ ವಿಶೇಷ ಅಭಿಮಾನದಿಂದ ಶ್ರೀ ಮಠದ ಕಾರ್ಯಗಳನ್ನು ನಡೆಸುತ್ತಿದ್ದಾರೆ.

ಕಾಶೀ ಕ್ಷೇತ್ರದಲ್ಲಿ ಶ್ರೀಗಳವರು ಶಿಷ್ಟ ಚಂಪೂನಾಟಕಾದಿ ಸಾಹಿತ್ಯಗಳು, ವ್ಯಾಕರಣ, ಸಾಂಖ್ಯ, ವೇದಾಂತ, ಮೀಮಾಂಸ, ಶಾಸ್ತ್ರಪ್ರಕರಣ ಗ್ರಂಥಗಳು, ( ಸಾಂಖ್ಯ ಗ್ರಂಥವೂ ) ನವ್ಯ ನ್ಯಾಯದಲ್ಲಿ ಕ್ರೋಡ ಪತ್ರಸಹಿತ ಸಾಮಾನ್ಯ ನಿರುಕ್ತ್ಯಂತವಾದ ಗ್ರಂಥಗಳೂ ಸಹ, ಸಾಂಗವೇದ ವಿದ್ಯಾಲಯಾಧ್ಯಕ್ಷ ಪಂಡಿತ ಬ್ರಂ|| ಶ್ರೀ|| ರಾಜರಾಜೇಶ್ವರ ಶಾಸ್ತ್ರಿಗಳ ಸಲಹೆಯಂತೆ ಅವರ ಶಿಷ್ಯರುಗಳಾದ ಪಂಡಿತ ಹೆಬ್ಬಾರು ಬ್ರಂ|| ಶ್ರೀ|| ಗಣಪತಿಶಾಸ್ತ್ರಿಗಳು, ( ಪಂಡಿತ ) ಬ್ರಂ|| ಶ್ರೀ|| ಹರಿರಾಮ ಶಾಸ್ತ್ರಿಗಳು, (ಶುಕ್ಲ) ಪಂಡಿತ ಬ್ರಂ|| ಶ್ರೀ|| ಜಯರಾಮಶಾಸ್ತ್ರಿಗಳು, ( ಶುಕ್ಲ ) ಮತ್ತು ಪಂಡಿತ ಬ್ರಂ|| ಶ್ರೀ|| ಗೋಕರ್ಣದ ಹೊಸಮನೆ ರಾಮಚಂದ್ರ ಶಾಸ್ತ್ರಿಗಳು ಇವರುಗಳಿಂದ ನಡೆಯುತ್ತಿತ್ತು. ಶ್ರೀಗಳವರು ವಾರಣಾಶಿಯಲ್ಲಿರುವಾಗಲೇ ಅಯೋಧ್ಯೆ, ಪ್ರಯಾಗ, ಗಯಾ, ವಿಂಧ್ಯಾಚಲ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿರುವರು.

ಆದರೆ ಹೀಗೆ ದೀರ್ಘಕಾಲದವರೆಗೆ ದೂರ ದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿ ವಾಸಮಾಡಿದರೆ ಇಲ್ಲಿ ಮಠದ ಪರಿಸ್ಥಿತಿ ಸುವ್ಯವಸ್ಥಿತವಾಗಲಾರದೆಂದೂ, ಗುರು-



॥ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರು ॥
ಆಹ್ನಿಕದಲ್ಲಿರುವುದು

ಶಿಷ್ಯ ಭಾವ ಶಿಥಿಲವಾಗಬಹುದೆಂದೂ, ಆಡಳಿತ ಸಮಿತಿಯವರೂ ಮತ್ತು ಶಿಷ್ಯ ಪ್ರಮುಖರೂ, ಅಭಿಪ್ರಾಯಪಟ್ಟು ಶ್ರೀ ಮಠದಲ್ಲಿಯೇ ಪಂಡಿತರನ್ನಿಟ್ಟು ಕೊಂಡು ಶಾಸ್ತ್ರಾಭ್ಯಾಸ ಮತ್ತು ವ್ಯವಹಾರಾದಿಗಳನ್ನು ನಡೆಸಿಕೊಂಡು ಬರಬೇಕಾಗಿ ಬಿನ್ನವಿಸಿಕೊಂಡ ಮೇರೆಗೆ ಶ್ರೀಗಳವರು ಅಲ್ಲಿಂದ ಸಂಸ್ಥಾನಕ್ಕೆ ಚಿತ್ತೈಸುವ ಅಭಿಪ್ರಾಯವನ್ನು ತಿಳಿದು, ಸಾಂಗವೇದ ವಿದ್ಯಾಲಯಾಧ್ಯಕ್ಷ ರಾಜರಾಜೇಶ್ವರ ಶಾಸ್ತ್ರಿ ಪ್ರಭೃತಿ ಪಂಡಿತ ಮಂಡಲಿಯವರು ಶ್ರೀಗಳವರನ್ನು ಪಾಠಶಾಲೆಗೆ ಆಮಂತ್ರಿಸಿ, ಸ್ವಾಗತ ಸತ್ಕಾರ ಪೂರ್ವಕ ಸನ್ಮಾನಿಸಿ, ಪಾಠಶಾಲಾ ಉದ್ದೇಶವನ್ನು ವಿವರಿಸಿ ಭಾಷಣಮಾಡಿ ಈಗಿನ ಕಾಲದಲ್ಲಿ ಮಠಾಧಿಪತಿಗಳು ನವ್ಯ ನ್ಯಾಯವನ್ನು ಅಭ್ಯಸಿಸುವುದು ವಿರಲವಾಗಿದೆ. ಈ ಸಂಸ್ಥಾನವು ವಿಶೇಷ ಆಸಕ್ತಿಯಿಂದ ಈ ಗಹನ ಶಾಸ್ತ್ರಾಭ್ಯಾಸಮಾಡಿದ್ದು ನಮಗೆಲ್ಲಾ ತುಂಬಾ ಆನಂದದಾಯಕವಾಗಿದೆ. ಮುಂದೆಯೂ ಶಿಷ್ಯ ಪ್ರಶಿಷ್ಯದ್ವಾರ ಈ ಶಾಸ್ತ್ರಪ್ರಸಾರ ಮಾಡಬೇಕೆಂದು ನಾವು ಪ್ರಾರ್ಥಿಸುತ್ತೇವೆಂದು ಬಿನ್ನವಿಸಿದರು. ನಂತರ ಶ್ರೀಗಳವರು ಈ ಪಾಠಶಾಲೆಯಲ್ಲಿ ಪ್ರತಿವರ್ಷ ಭಾದ್ರಪದದಲ್ಲಿ ನಡೆಯುವ ನ್ಯಾಯ ಶಾಸ್ತ್ರದ ಶಾಸ್ತ್ರಾರ್ಥದಲ್ಲಿ ವಿಜಯ ಸಂಪಾದಿಸಿದ ವಿದ್ಯಾರ್ಥಿಗಳಿಗೆ ೨೫ ರೂಪಾಯಿಯನ್ನು ಪಾರಿತೋಷಕ ಕಳುಹಿಸುವುದಾಗಿ ಉದ್ಘೋಷಿಸಿದರು. ಆನಂತರ ಪಂಡಿತ ಮಂಡಲಿಯವರು ಸಭಾಕಾರ್ಯವನ್ನು ಮುಗಿಸಿ, ಶ್ರೀಗಳವರನ್ನು ಬೀಳ್ಕೊಟ್ಟರು. ಅಲ್ಲಿಂದ ತೀರ್ಥಹಳ್ಳಿಯ ಮಠಕ್ಕೆ ದಯಮಾಡಿಸಿದರು.

ಆಮೇಲೆ ಶ್ರೀಗಳವರು ತೀರ್ಥಹಳ್ಳಿ ಮಠದಲ್ಲಿ "ಮಠಃ ಛಾತ್ರಾದಿ ನಿಲಯಃ" ಎಂಬಂತೆ ಒಂದು ಪಾಠಶಾಲೆಯನ್ನು ಸ್ಥಾಪಿಸಿ, ಶಾಸ್ತ್ರಿಗಳನ್ನೂ ಕೆಲವು ವಿದ್ಯಾರ್ಥಿಗಳನ್ನೂ ಇಟ್ಟುಕೊಂಡು ಪಾಠಶಾಲೆಯನ್ನು ಪ್ರಾರಂಭಿಸಿದರು.

ನಂತರ ನಂದನ ಸಂವತ್ಸರದಲ್ಲಿ ಸಂಪೇಕಟ್ಟೆ ಮಠದ ಎಲ್ಲಾ ಚರ ಸ್ಥಿರಾಸ್ತಿಗಳೂ, ಶ್ರೀ ಮಠಕ್ಕೆ ಸರ್ಕಾರದಿಂದ ವಹಿಸಲ್ಪಟ್ಟವು. ಇದೇ ಸಂವತ್ಸರ ದಲ್ಲಿ ಶಿಷ್ಯರ ಪ್ರಾರ್ಥನೆಯಂತೆ ಸಂಚಾರ ಹೊರಟು, ಕೆಳದಿ, ಕ್ಯಾಸನೂರು, ಚಂದಾವರ, ಸೀಮೆಗಳಿಗೆ ಭೇಟಿಕೊಟ್ಟರು. ಎಲ್ಲಾ ಕಡೆಗೂ ಸ್ವಾಗತ ಸತ್ಕಾರ ಸಮಾರಂಭಗಳೂ, ಕೆಲವು ಕಡೆ ಕಿರೀಟ ಧಾರಣಾ ಮಹೋತ್ಸವವೂ, ಧರ್ಮೋಪನ್ಯಾಸಗಳೂ, ನಡೆದವು. ಚಂದಾವರ ಸೀಮೆ ಹೊಸಾಕುಳಿ ಪಂಚಗ್ರಾಮದ ಮಕ್ಕಿದೇವಸ್ಥಾನದಲ್ಲಿ ಒಂದು ಸಾಮವೇದ ಪಾಠಶಾಲೆಯನ್ನು ಸ್ಥಾಪಿಸಿದರು. ಕೆಕ್ಕಾರು ಮಠದ ಕೆಲವು ಭಾಗಗಳನ್ನು ಜೀರ್ಣೋದ್ಧಾರ ಮಾಡಿಸಿದರಲ್ಲದೆ, ರಾಮಚಂದ್ರಪುರ ಮಠದ ವಿದ್ಯಾಮಂಟಪದ ಕಟ್ಟಡವನ್ನು ಜೀರ್ಣೋದ್ಧಾರ

ಮಾಡಿಸಿದರು. ವಿಜಯ ಸಂವತ್ಸರದ ಚಾತುರ್ಮಾಸ್ಯ ವ್ರತವನ್ನು ತೀರ್ಥಹಳ್ಳಿ ಮಠದಲ್ಲೇ ಪೂರೈಸಿ, ಹೊನ್ನಾವರ ರಾಮತೀರ್ಥದ ಮೊಕ್ಕಾಮಿನಲ್ಲಿರುವಾಗ ಗೇರುಸೊಪ್ಪ ಸೀಮೆಯ ಅಪ್ಸರಕೊಂಡ ಮಠದ ಶಿಷ್ಯರು ಶ್ರೀಗಳವರನ್ನು ತಮ್ಮ ಮಠಕ್ಕೆ ಬರಮಾಡಿಕೊಂಡು ಮಠದ ಅಧಿಕಾರವನ್ನು ವಹಿಸಿದರು.

ನಂತರ ಸಿದ್ದಾಪುರ ತಾಲ್ಲೂಕು ಬಿಳಗಿ ಸೀಮೆಯ ಶಿಷ್ಯರು ಬಿನ್ನವಿಸಿ ಕೊಂಡಮೇರೆಗೆ ಈ ಸೀಮೆಯಲ್ಲಿ ಇಟಗಿ ಶ್ರೀರಾಮೇಶ್ವರದೇವಾಲಯದ ಮೊಕ್ಕಾಂ ಮೊದಲುಗೊಂಡು ಈ ಎಲ್ಲಾ ಮಾಗಣಿಯಲ್ಲೂ, ಸಂಚರಿಸುತ್ತ ಧರ್ಮಪ್ರವಚನ ನಡೆಸುತ್ತಿದ್ದಾರೆ. ಸರ್ 1954 ನೇ ವಿಜಯ ಸಂವತ್ಸರದ ಫಾಲ್ಗುಣಮಾಸದಲ್ಲಿ ಈ ಸೀಮೆಯಲ್ಲಿ ಸಂಚಾರಮಾಡುತ್ತಿರುವಾಗ ಭಾನುಕುಳಿಮಠ, ಕ್ಯಾದಿಗೆಮಠ ಸಹ ಪ್ರಧಾನ ಮಠವಾದ ಶ್ರೀರಾಮಚಂದ್ರಾಪುರಮಠದಲ್ಲಿ ವಿಲೀನವಾಯಿತು.

ಈಗಿನ ಶ್ರೀ ರಾಘವೇಂದ್ರಭಾರತೀ ಸ್ವಾಮಿಗಳವರು ವಿದ್ಯಾಭಿಮಾನಿ ಗಳೂ, ವಿಶಾಲ ಹಾಗೂ ರಾಷ್ಟ್ರೀಯ ಮನೋಭಾವನೆಯುಳ್ಳವರೂ, ವ್ಯವಹಾರ ಚತುರರೂ, ಶಾಂತ ಸ್ವಭಾವದವರೂ, ಸನಾತನ ವೈದಿಕ ಧರ್ಮದ ಸೇವೆಯೇ ತಮ್ಮ ಜೀವನ ಸರ್ವಸ್ವವೆಂದು ಆಚರಿಸುವವರೂ, ಶಿಷ್ಯ ಸಮಾಜದಲ್ಲಿ ಧಾರ್ಮಿಕ ಜಾಗ್ರತೆಯನ್ನೂ, ಒಗ್ಗಟ್ಟನ್ನೂ ಉಂಟುಮಾಡುವ ಕಾರ್ಯದಕ್ಷತೆಯುಳ್ಳವರೂ ಆಗಿರುತ್ತಾರೆ.

ಇಂಥ ಮಹನೀಯರನ್ನು ಹವ್ಯಕ ಮಂಡಲ ಧರ್ಮಪೀಠಾಧೀಶರನ್ನಾಗಿ ಪಡೆದ ಶಿಷ್ಯ ಜನತೆಯು ಧರ್ಮದ ಸದುಪಯೋಗವನ್ನು ಹೊಂದಿ ಕೃತಾರ್ಥರಾಗ ಲೆಂದು ಶ್ರೀ ಮಠದ ಆರಾಧ್ಯದೇವರಾದ ಶ್ರೀ ಸೀತಾರಾಮಚಂದ್ರ, ಚಂದ್ರಮೌಳೀ ಶ್ವರರಲ್ಲಿ ವಿನಯ ಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಯದತ್ರ ಸೌಷ್ಠವಂ ಕಿಂಚಿತ್ ತದ್ಗುರೋರೇವಮೇನಹಿ ।
ಯದತ್ರಾ ಸೌಷ್ಠವಂ ಕಿಂಚಿತ್ ತನ್ಮಮೈವಗುರೋರ್ನಹಿ ॥





॥ ಶ್ರೀಮದ್ರಾಘವೇಂದ್ರ ಭಾರತೀ ಸ್ವಾಮಿಗಳವರು ॥

ಕಿರೀಟ ಧಾರಣೆಯಲ್ಲಿರುವುದು.

॥ ಶ್ರೀ ॥



## ತೃತೀಯ ಭಾಗ.

# ಮಠಗಳು ಮತ್ತು ಆಡಳಿತಗಳು.

ಈ ಮಠಾಧಿಪತಿಗಳು ಬೇರೆ ಬೇರೆ ಕಡೆಗಳಿಗೆ ಸಂಚಾರ ಹೊರಟಾಗ ಮಾರ್ಗದಲ್ಲಿ ತಡೆಯಾಗದಂತೆ ಆಯಾ ಸರ್ಕಾರದಿಂದ ಕೊಡಲ್ಪಟ್ಟ ರಹದಾರಿಗಳು ೩೭ ಇವೆ. ಹೈದರ ಟೀಪುಸುಲ್ತಾನರಿಂದ ಹಿಡಿದು ಕಂಪನೀ ಸರ್ಕಾರದವರೆಗೂ ಸರ್ಕಾರದಲ್ಲಿ ತನ್ನ ವರ್ಚಸ್ಸನ್ನು ಈ ಮಠವು ಕಾಪಾಡಿಕೊಂಡು ಬಂದಿದೆ. ಮೂಲ ಮಠವಾದ ಗೋಕರ್ಣದ ಮಠವು ರಾಮಚಂದ್ರಪುರಕ್ಕೆ ವರ್ಗಾಯಿಸಲ್ಪಟ್ಟನಂತರ "ರಾಮಚಂದ್ರಪುರ ಮಠವೇ" ಪ್ರಧಾನಮಠವಾಯಿತು. ಕೆಕ್ಕಾರು ಮಠವೂ ಗೋಕರ್ಣ ಮಠದಿಂದಲೇ ಶಾಖೆಯೊಡೆದು ಪುನಃ ರಾಮಚಂದ್ರಪುರಮಠದಲ್ಲೇ ಲೀನವಾಯಿತು. ಕೆಕ್ಕಾರು ಮಠದಿಂದ ನೆಲೆಮಾವಿನ ಮಠದ ಶಾಖೆಯೊಡೆಯಿತು. ಇನ್ನೂ ಕೆಲವು ಬೇರೆ ಬೇರೆ ಸಂನ್ಯಾಸಿಗಳಿಂದ ಸ್ಥಾಪಿಸಲ್ಪಟ್ಟ ಮಠಗಳು ಕಾಲಾಂತರದಲ್ಲಿ ಶಿಷ್ಯ ಪರಂಪರೆಯಿಲ್ಲದೆ ವಿಚ್ಛಿನ್ನವಾಗಿ ರಾಮಚಂದ್ರಪುರ ಮಠಕ್ಕೇ ಸೇರಿಕೊಂಡವು. ಮತ್ತೆ ಕೆಲವು ಮಠಗಳ ಸಂನ್ಯಾಸಿಗಳೇ ಸ್ವತಃ ಈ ಮಠಾಧಿಪತಿಗಳಿಗೆ ತಮ್ಮ ಮಠಗಳನ್ನು ವಹಿಸಿ ಕೊಟ್ಟರು. ಹೀಗೆ ಹಲವು ತರಹದಿಂದ ಈ ಮಠದಲ್ಲಿ ವಿಲೀನವಾಗಿರುವ, ಅಧೀನವಾಗಿರುವ ಶಾಖಾ ಮಠಗಳು ಮತ್ತು ಪ್ರಧಾನ ಮಠ, ಎಲ್ಲಾ ಸೇರಿ ಒಟ್ಟು ನಾಲ್ವತ್ತು ಮಠಗಳಿವೆಯೆಂದು ಕಂಡು ಬರುತ್ತದೆ. ಇವುಗಳ ಕ್ರಮವಾದ ಪಟ್ಟಿಯನ್ನು ಈ ಕೆಳಗೆ ಕೊಟ್ಟಿದೆ.

೧ ಗೋಕರ್ಣದ ರಘೂತ್ತಮಮಠ:– ಇದು ಗೋಕರ್ಣದಲ್ಲಿದೆ. ಇಲ್ಲಿ ವರದ ಮುನಿಗಳಿಂದ ದತ್ತವಾದ ತಪೋರಾಮ ವಿಗ್ರಹವಿದೆ. ಇಲ್ಲಿ ವಿದ್ಯಾನಂದರಿಂದ ೧೦ ಗುರುಗಳ ಪರಂಪರೆ ನಡೆದಿದೆ.

೨ ರಾಮಚಂದ್ರಪುರಮಠ:- ಇದು ಹೊಸನಗರದಿಂದ ದಕ್ಷಿಣಕ್ಕೆ ಶರಾವತೀ ನದೀ ತೀರದಲ್ಲಿದೆ. ಮಠವು ಭದ್ರವಾದ ಕಲ್ಲಿನ ಕಟ್ಟಡದಿಂದ ಕೂಡಿದೆ. ಈಗ ಇದೇ ಪ್ರಧಾನ ಮಠವಾಗಿದೆ. ಇದರಲ್ಲಿ ೧೧ ನೇ ರಾಮಚಂದ್ರಭಾರತಿಗಳಿಂದ ಈವರೆಗೆ ೨೩ ತಲೆಗಳಿದಿದೆ. ಈಗ ಹಾಲಿ ೨೪ ನೇ ತಲೆಯವರಿದ್ದಾರೆ. ಈ ಪರಂಪರೆಯು ಅವಿಚ್ಛಿನ್ನವಾಗಿ ನಡೆದು ಬಂದಿದೆ. ( ಇಸವಿ ಸನ್ ೧೯೫೩ )

೩ ಕೆಕ್ಕಾರು ಮಠ:- ಇದು ಹೊನ್ನಾವರ ತಾಲ್ಲೂಕು ಕೆಕ್ಕಾರಿನಲ್ಲಿದೆ. ಇಲ್ಲಿ ತಪೋರಾಮ ವಿಗ್ರಹವಿದೆ. ಇದು ೩೦ ನೇ ರಾಮಚಂದ್ರ ಭಾರತಿಗಳವರ ಕಾಲದಲ್ಲಿ ರಾಮಚಂದ್ರಪುರಮಠಕ್ಕೆ ಸೇರಿತು.

೪ ತೀರ್ಥಹಳ್ಳಿ ಮಠ:- ಈ ಮಠದಲ್ಲಿದ್ದ ಗಂಗಾಧರಪುರಿ ಎಂಬ ಸಂನ್ಯಾಸಿಗಳು ಉತ್ತರ ದೇಶಕ್ಕೆ ಹೋಗಿ ಗುಜರಾಥ ಪ್ರಾಂತದಲ್ಲಿದ್ದಾಗ ತಮ್ಮ ಸಂನ್ಯಾಸ ಧರ್ಮದಿಂದ ಭ್ರಷ್ಟರಾದರು. ನಂತರ ಅಮರೇಂದ್ರಪುರಿ ಎಂಬುವರಿಗೆ ರಾಮಚಂದ್ರಪುರದ ೩೧ ನೇ ರಾಘವೇಂದ್ರ ಭಾರತಿಗಳು ಸಂನ್ಯಾಸ ಕೊಟ್ಟಿದ್ದರು. ಇವರು ೧೮೩೮ ನೇ ಇಸವಿಯಲ್ಲಿ ರಾಮಚಂದ್ರಪುರಕ್ಕೇ ತೀರ್ಥಹಳ್ಳಿ ಮಠವನ್ನು ವಹಿಸಿಕೊಟ್ಟರು. ಈ ಮಠವು ಸುಮಾರು ೧೪೮೮ ನೇ ಶಾಲಿವಾಹನ ಶಕೆಯ ಕ್ರೋಧನ ಸಂವತ್ಸರದಲ್ಲಿ ಸ್ಥಾಪನೆಯಾದಂತೆಯೂ, ಈ ಮಠಾಧಿಪತಿಗಳಿಗೆ ಈ ಪ್ರಾಂತದ ೭೨ ಹವ್ಯಕರ ಮನೆಗಳ ಆಚಾರ-ವಿಚಾರ ಕಾಣಿಕೆವಸೂಲಿ, ವಗ್ಯೆರೆ ಕಾರ್ಯಗಳನ್ನು ವಹಿಸಿದಂತೆಯೂ, ಕೆಲವು ದಾಖಲೆಗಳಿಂದ ಕಂಡುಬರುತ್ತದೆ. ೧೮೩೮ ನೇ ಇಸವಿಯಿಂದ ಇದು ರಾಮಚಂದ್ರಪುರ ಮಠದ ಸ್ವಾಧೀನದಲ್ಲೇ ಇದೆ. ಇದರಲ್ಲಿ ಪ್ರತ್ಯೇಕ ಸನ್ಯಾಸವಾಗಲಿಲ್ಲ. ಈ ಮಠವು ತೀರ್ಥಹಳ್ಳಿಯ ರಾಯಸದ ಅಗ್ರಹಾರದಲ್ಲಿದೆ. ಮಠದ ಮಧ್ಯ ಭಾಗದಲ್ಲಿ ಶ್ರೀ ಲಕ್ಷ್ಮೀನೃಸಿಂಹ ದೇವಾಲಯವಿದೆ. ಚಾತುರ್ಥಿಕಜ್ವರದ ಬಿಡುಗಡೆಗಾಗಿ ಇಲ್ಲಿ ಅನೇಕ ಹರಕೆಗಳು ನಡೆಯುತ್ತವೆ.

೫ ರುದ್ರಪಾದಮಠ:- ಇದು ಕಡೂರು ಡಿಸ್ಟ್ರಿಕ್ಟಿನ ಕಳಸದಲ್ಲಿದ್ದು ಪ್ರಧಾನಮಠಕ್ಕೆ ಸೇರಿಹೋಗಿದೆ.

೬ ಕೊಪ್ಪಿನಕೈ ಮಠ:- ಇದು ಉತ್ತರ ಕನ್ನಡಜಿಲ್ಲೆಯ ಸಿದ್ದಾಪುರ ತಾಲ್ಲೂಕಿನಲ್ಲಿತ್ತು. ೩೧ನೇ ರಾಘವೇಂದ್ರ ಭಾರತಿಗಳ ಕಾಲದಲ್ಲಿ ಪ್ರಧಾನಮಠಕ್ಕೆ ವಿಲೀನವಾಗಿದೆ.

೭-೮ ಭಾನುಕುಳಿ ಮತ್ತು ಕೇದಿಗೆಮಠ:- ಸಿದ್ದಾಪುರ ತಾಲ್ಲೂಕಿನಲ್ಲಿದೆ. ಈ ಎರಡೂ ಮಠಗಳಲ್ಲೂ ಸ್ವಾಮಿಗಳಿಲ್ಲ. ಜಮೀನಿದೆ.

೯ ನೆಲೆಮಾವಿನ ಮಠ:– ಇಸವಿ ಸ್ ೧೯೫೨ ನೇ ನಂದನ ಸಂವತ್ಸರ ದಲ್ಲಿ ಈ ಮಠದಲ್ಲಿದ್ದ ಪುರುಷೋತ್ತಮ ನೃಸಿಂಹಭಾರತೀ ಸ್ವಾಮಿಗಳೆಂಬುವರು ಮುಕ್ತರಾಗಿದ್ದಾರೆ.

೧೦ ಉಪ್ಪುಂದ ಮಠ:– ಇದು ಕುಂದಾಪುರದಿಂದ ನಾಲ್ಕು ಮೈಲಿ ದೂರ ದಲ್ಲಿದ್ದು ಈಗ ನಷ್ಟವಾಗಿದೆ.

೧೧ ಹೊನ್ನೆಹಳ್ಳಿ ಮಠ:– ( ಸ್ವರ್ಣವಲ್ಲಿ ) ಶಿರಸಿ ತಾಲ್ಲೂಕಿನಲ್ಲಿದೆ; ಜಮಿನಿದೆ; ಸ್ವಾಮಿಗಳವರೂ ಇದ್ದಾರೆ.

೧೨ ಅಪ್ಸರಕೊಂಡ ಮಠ:– ಹೊನ್ನಾವರ ತಾಲ್ಲೂಕಿನಲ್ಲಿದೆ. ಇಲ್ಲಿ ಒಬ್ಬರು ಸ್ವಾಮಿಗಳಿದ್ದರು. ಸ್ ೧೯೫೪ ರಲ್ಲಿ ಪ್ರಧಾನ ಮಠಕ್ಕೆ ವಿಲೀನವಾಯಿತು.

೧೩ ಮುಂಡಹಳ್ಳಿ ಮಠ:– ಭಟ್ಕಳದ ಹತ್ತಿರವಿದ್ದು ಅಲ್ಲಿ ಸ್ವಾಮಿಗಳು ಇರುವುದಿಲ್ಲ.

| | |
|---|---|
| ೧೪ ಅಮರಗೊಡ್ಲು ಕೃಷ್ಣಾನಂದ ಮಠ ಮತ್ತು ೧೫ ಹೊಸಳ್ಳಿ ಮಠ:– | ಈ ಎರಡೂ ಮಠಗಳೂ ಸಾಗರ ತಾಲ್ಲೂಕಿನಲ್ಲಿದ್ದವು. ೩೧ ನೇ ರಾಘವೇಂದ್ರ ಭಾರತೀ ಸ್ವಾಮಿಗಳವರ ಕಾಲದಲ್ಲಿ ಪ್ರಧಾನ ಮಠದೊಂದಿಗೆ ವಿಲೀನವಾಯಿತು |

೧೬ ಕೊಡ್ಲಕೆರೆ, ೧೭ ಚಿತ್ರಿಗೆ, ೧೮ ತುಂಬಲೆ, ೧೯ ಧೇನೇಮಠ:– ಈ ನಾಲ್ಕು ಮಠಗಳೂ, ಅಧೀನ ಮಠವಾಗಿ ಕುಮಟಾ ತಾಲ್ಲೂಕಿನಲ್ಲಿದ್ದವು. ಈಗ ನಷ್ಟವಾಗಿದೆ.

೨೦ ತೆಪ್ಪದ ಮಠ:– ಇದರ ಬಗ್ಗೆ ವಿವರ ಗೊತ್ತಿಲ್ಲ.

೨೧ ಸಂಪೇಕಟ್ಟೆ ಮಠ:– ಇದು ಹೊಸನಗರ ತಾಲ್ಲೂಕಿನಲ್ಲಿತ್ತು ಈಗ ವರ್ತಮಾನರಿರುವ ೩೪ ನೇ ರಾಘವೇಂದ್ರ ಭಾರತಿಗಳವರ ಕಾಲದಲ್ಲಿ (ಸ್ ೧೯೫೧) ವಿಲೀನವಾಯಿತು.

೨೨ ವದ್ದಳ್ಳಿ ಮಠ:– ಸಾಗರ ತಾಲ್ಲೂಕಿನಲ್ಲಿದೆ. ಈಗ ಮಠ ನಷ್ಟ ವಾಗಿದೆ. ಇಲ್ಲಿ ಹಿಂದೆ ಒಳ್ಳೇ ಸಿದ್ಧಪುರುಷರಿದ್ದರೆಂದು ವದಂತಿ ಇದೆ.

೨೩ ಕಳಸವಳ್ಳಿ ಮಠ:– ಸಾಗರ ತಾಲ್ಲೂಕಿನಲ್ಲಿತ್ತು.

೨೪ ಕೋಗೋಡು ಮಠ:– ಸಾಗರ ತಾಲ್ಲೂಕಿನಲ್ಲಿದ್ದು ಪ್ರಧಾನ ಮಠಕ್ಕೆ ಸೇರಿಕೊಂಡಿದೆ. ಈಚೆಗೆ ಇಲ್ಲಿ ಒಂದು ದೇವಸ್ಥಾನ ಕಟ್ಟಿದ್ದಾರೆ.

೨೫ ಹಲಸಿನಕೊಡ್ಲು ಮಠ:– ಸ್ವಲ್ಪ ಜಮೀನಿದೆ, ಪೂಜೆ ನಡೆಯುತ್ತಿದೆ.

೨೬ ಬಾಳೆಗದ್ದೆ ಮಠ, ೨೭ ಕೆಳಗಿನ ತೆಂಗಿನಕೆರೆ ಮಠ, ೨೮ ಮಕ್ಕಿ ಮಠ, ೨೯ ಕವಡೆಕೇರಿ ಮಠ, ೩೦ ಹಣಜಿ ಮಠ, ೩೧ ಮುಗುರಿಮಠ, ೩೨ ಉಂಚಿಗೆ ಮಠ, ೩೩ ಹಣವೈಲು ಮಠ,:- ಈ ಮಠಗಳೆಲ್ಲವೂ ಈಗ ನಷ್ಟವಾಗಿದ್ದು ನಾಮಾವಶೇಷವಾಗಿವೆ. ಇವುಗಳಿಗೆ ಸ್ಥಾನ ನಿರ್ದೇಶವೂ ಕಾಣುವುದಿಲ್ಲ. ಈ ಮಠಗಳಿಗೂ, ಪ್ರಧಾನ ಮಠಕ್ಕೂ ಇರುವ ಸಂಬಂಧವು ಮಾತ್ರ ದಾಖಲೆಗಳಿಂದ ತಿಳಿದು ಬರುತ್ತದೆ.

೩೪ ಸಾಲ್ಕೋಡುಮಠ:- ಹೊನ್ನಾವರ ತಾಲ್ಲೂಕಿನಲ್ಲಿದ್ದು ಈಗನಷ್ಟವಾಗಿದೆ.

೩೫ ಕಂಡೂರುಗದ್ದೆಮಠ:- ಸಾಗರ ತಾಲ್ಲೂಕಿನ ಕರೂರು ಸೀಮೆಯಲ್ಲಿದ್ದು ಈಗ ಲುಪ್ತವಾಗಿದೆ.

೩೬ ಮಳನೀರುಮಠ:- ಇದು ಕೋಟದ ಜಗತ್ತಿನಲ್ಲಿರುವ ಕೋಟವೆಂಬ ಪ್ರದೇಶದಲ್ಲಿದ್ದು ಈಗ ನಾಮಾವಶೇಷವಾಗಿದೆ.

೩೭ ಕಳಚಿಮಠ:- ಯಲ್ಲಾಪುರ ತಾಲ್ಲೂಕಿನಲ್ಲಿದ್ದು ಈಗ ಲುಪ್ತವಾಗಿದೆ.

೩೮ ಬಿದರಕಾಲುಮಠ:- ಸಿದ್ದಾಪುರ ತಾಲ್ಲೂಕಿನಲ್ಲಿದ್ದು ಈಗಲುಪ್ತವಾಗಿದೆ.

೩೯, ೪೦ ಈ ಎರಡೂ ಮಠಗಳ ಹೆಸರುಗಳು ಸರಿಯಾಗಿ ಗೊತ್ತಾಗುವಂತಿಲ್ಲ.

ಈಗ ಹಾಲಿ ಕೆಕ್ಕಾರು, ತೀರ್ಥಹಳ್ಳಿ, ಗೋಕರ್ಣ, ಸಂಪೆಕಟ್ಟೆ ಈನಾಲ್ಕು ಮಠಗಳೂ ಆಸ್ತಿಗಳೂ, ಆಮಠಕ್ಕೆ ಸಂಬಂಧಿಸಿದ ಕಾಣಿಕೆಗಳೂ, ಪ್ರಧಾನ ಮಠವಾದ ರಾಮಚಂದ್ರಪುರಮಠಕ್ಕೇ ಸೇರಿದ್ದು, ಎಲ್ಲ ಆಡಳಿತಗಳೂ, ಪ್ರಧಾನ ಮಠದ ಅಧೀನದಲ್ಲೇ ಇವೆ. ಒಟ್ಟು ಎಲ್ಲಾ ಆಸ್ತಿಗಳಿಂದ ಸುಮಾರು ಎರಡೂವರೆ ಸಾವಿರ ರೂಪಾಯಿಗಳ ಕಂದಾಯವಾಗುತ್ತದೆ.

ಮಠದ ಆಸ್ತಿ ಮತ್ತು ಆರ್ಥಿಕ ಆಡಳಿತ ವ್ಯವಸ್ಥೆಯ ಬಗ್ಗೆ ಪಾರುಪತ್ಯಗಾರರೆಂಬ ಪ್ರಧಾನರು ಮಠದಲ್ಲಿರುತ್ತಾರೆ. ಅಲ್ಲದೆ ಲೆಕ್ಕಪತ್ರ ಬರವಣಿಗೆಗಾಗಿ ಒಬ್ಬ ಶ್ಯಾನುಭೋಗ, ಧಾರ್ಮಿಕ ವಿಷಯ ವಿಚಾರಗಳ ಬಗ್ಗೆ ಒಬ್ಬ ಶಾಸ್ತ್ರಿಗಳಿರುತ್ತಾರೆ. ಅಡಿಗೆಯವರು, ದೇವರಪೂಜೆ ಪಡಿಚಾಕರರು, ದಫೇದಾರ, ಹರಿಕಾರ, ವಗ್ಯೆರೆ ಜನರು ವೇತನದಾರರಾಗಿರುವರು. ಇನ್ನು ಇತರೆ ಚಿಲ್ಲರೆ ಕೆಲಸಗಳಿಗಾಗಿ ಎರಡು ನೂರು ಜನರಿರುವದುಂಟು. ಮಠದಲ್ಲಿ ಒಂದು ವೇದ ಪಾಠಶಾಲೆಯೂ, ಶಾಸ್ತ್ರಿಗಳೂ, ವಿದ್ಯಾರ್ಥಿಗಳೂ, ಇರುತ್ತಾರೆ.

ಪ್ರತಿ ಸೀಮೆಯಲ್ಲೂ ಆಚಾರ-ವಿಚಾರ, ಕಾಣಿಕೆ ವಸೂಲಿ, ಮಠದಿಂದ ಬಂದ ಆಜ್ಞಾ ಪತ್ರಗಳನ್ನು ಸೀಮೆಯಲ್ಲಿ ಜಾರಿ ಮಾಡುವಿಕೆ ಈ ಮುಂತಾದ ಕೆಲಸ

ಗಳಿಗಾಗಿ ಎರಡು ಜನರು ಅಥವಾ ಪಂಚಾಯಿತರು ಇರುತ್ತಾರೆ. ಇವರಿಗೆ ಸಂಬಳ ವಿಲ್ಲ. ಕೇವಲ ಗೌರವಾರ್ಥ ಕೆಲಸ ಮಾಡತಕ್ಕವರು. ಸೀಮೆಯಲ್ಲಿ ಯಾವುದೇ ಒಂದು ವರ್ಣಾಶ್ರಮ ಧರ್ಮಕ್ಕೆ ಸಂಬಂಧಿಸಿದ ವಿಷಯಗಳಿದ್ದರೂ, ಸೀಮೆಯ ಸಾರ್ವಜನಿಕ ಸಭೆಯಲ್ಲಿ ಆರೋಪಿಗಳ ವಿಚಾರ ನಡೆಸಿ, ಸೀಮೆಯವರು ಬರೆದ " ಇರಾದೆ " ಯನ್ನು ಶ್ರೀ ಸ್ವಾಮಿಗಳವರು ಪರಿಶೀಲಿಸಿ, ಸೂಕ್ತ ನಿರ್ಣಯಗಳನ್ನು ಕೊಡುವರು.

ಕಾಣಿಕೆಯು ಎಲ್ಲ ಕಡೆಗಳಲ್ಲೂ ಒಂದು ನಿರ್ದಿಷ್ಟ ನಿಯಮದಿಂದ ವಸೂಲ್ಮಾಡುತ್ತಾ ಇಲ್ಲ. ಒಂದೊಂದು ಕಡೆ ಒಂದೊಂದು ವಿಧವಾಗಿದೆ.

ವಿಜಯ ಸಂವತ್ಸರದ ಫಾಲ್ಗುಣ
ಶುದ್ಧ ತ್ರಯೋದಶಿ.

ತಾರೀಕು
17-3-1954.



## ಶ್ರೀಮದ್ರಾಮಚಂದ್ರಪುರ ಮಠದಲ್ಲಿ ಪೂರ್ವಕಾಲದಿಂದ ಸಂಗ್ರಹಿಸಿದ ಸನದು ಸೂತ್ರಗಳು.

---

ಶ್ರೀ ಗಣೇಶಾಯನಮಃ ‖ ಸ್ವಸ್ತಿ ‖ ನಮಸ್ತುಂಗ ಶಿರಸ್ತುಂಗ ಚಂದ್ರ ಚಾಮರ ಚಾರವೆ ‖ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ‖ ಶ್ರೀ ಮನ್ಮಹಾರಾಜಾಧಿರಾಜ ವೀರ ಪರಮೇಶ್ವರ ವೀರ ಪ್ರತಾಪ ದೇವರಾಜ ಮಹಾರಾಜ ವಿಜಯ ನಾನಾ ದೇಶದ ರಾಜಧಾನಿಯಲ್ಲೂ ಒಟ್ಟು ಸಮಸ್ತ ದೇಶಂಗಳನ್ನು ಸ್ವಧರ್ಮದಲ್ಲಿ ಪ್ರತಿಪಾಲಿಸುತ್ತಂ, ಇದಂ ದಿನ ಶಕ ವರ್ಷ ೧೩೭೧ ನೆಯ ಶುಕ್ಲ ಸಂವತ್ಸರದ ಮಾಘ ಬಹುಳ ೩೦ ರಲ್ಲು ‖ ಶ್ರೀಮತ್ಪರಮ ಹಂಸ ಪರಿವ್ರಾಜಕಾಚಾರ್ಯ ವರ್ಯ ಶ್ರೀಮತ್ ಭಗವತ್ಪಾದ ಪೂಜ್ಯ ಶಿಷ್ಯ ಶ್ರೀಮಚ್ಛಂಕರಾಚಾರ್ಯ ಶಿಷ್ಯ ಸುರೇಶ್ವರಾಚಾರ್ಯ ಪರಂಪರೆ ಪುರಸ್ಸರ ಭೋಗವರ್ಧನವಾಲ ಪುರುಷಾಧಿಷ್ಠಿತರಹ ಋಷ್ಯಶೃಂಗ ಪುರಾಧಿವಾಸ ಕೃಷ್ಣ ತೀರ್ಥ ಗುರು ಕರಕಮಲ ಸಂಜಾತರಹ ವಿದ್ಯಾರಣ್ಯ ಶ್ರೀಪಾದಂಗಳು. ಶ್ರೀಮತ್ ಪರಮ ಹಂಸ ಪರಿವ್ರಾಜಕಾಚಾರ್ಯ ವರ್ಯ ಶ್ರೀಮದ್ಭೋಗವರ್ಧನ ವಾಲ ಪುರುಷಾಧಿಷ್ಠಿತರಹ ಗೋಕರ್ಣದ ರಘೂತ್ತಮಮಠದ ಸೀತಾರಾಮಚಂದ್ರ ಭಾರತೀ ಶಿಷ್ಯ ಚಿದ್ಬೋಧ ಭಾರತೀಸ್ವಾಮಿಗಳಿಗೆ ಕೊಟ್ಟ ವೈಭವ ತಾಮ್ರಶಾಸನ ಭಾಷಾ ಕ್ರಮವೆಂತೆಂದರೆ:— ಪೂರ್ವದಲ್ಲು ನಮ್ಮ ಋಷ್ಯಶೃಂಗಪುರಾಧಿವಾಸ ನಿತ್ಯಬೋಧಘನಾಚಾರ್ಯ ಜ್ಯೇಷ್ಠ ವಿದ್ಯಾನಂದಾಚಾರ್ಯ ಕವಲಿನ ಪರಂಪರೆ ಪುರಸ್ಸರವಾಗಿ, ಹೈವದೇಶಸ್ಥಿತ ಹೈವದ್ರಾವಿಡ ಸಂಜ್ಞಿತ ಬ್ರಾಹ್ಮಣ್ಯ ಧರ್ಮಾಚಾರವಿಚಾರ ತತ್ಪುರಸ್ಸರಪ್ರಾಯಶ್ಚಿತ್ತ ಅಗ್ರತೀಜಪೂಜೆ ಸ್ಥಾನಮಾನ್ಯ ಗೋಕರ್ಣ ಮಂಡಲಾಚಾರ್ಯತ್ವ ಮದಲಹದ್ದು ಪ್ರಕಾಶಿಸಿ ಬಹದರಿಂದಲೂ ಉಭಯ ಸಾಂಪ್ರದಾಯವು ಏಕವಹದರಿಂದಲೂ, ಶ್ರೀ ಮಹಾಬಲೇಶ್ವರ ಸನ್ನಿಧಿಯಲ್ಲು ನಿಮಗೆ ಸಿಂಹಾಸನ, ಕಿರೀಟ, ತಿರ್ಯಗಾಂದೋಳಿಕ, ಶ್ವೇತಛತ್ರ ಉಭಯಚಾಮರ, ಮಕರತೋರಣ, ವ್ಯಜನ, ಹಗಲು ಜ್ಯೋತಿ, ಪೀತಪಿಶಂಗವರ್ಣ ಪತಾಕಾದಿ ಚಿನ್ಹಗಳಲ್ಲಿ, ತಾಳಶಂಖಚಕ್ರಾದಿವಾದ್ಯ ಮೊದಲಾದ್ದನ್ನು, ನಾನಾದೇಶ ಗತ ಜನ ಸಮೂಹದಲ್ಲಿ ಅಧಿಕರಿಸಿ ಕೊಟ್ಟೆವು. ನೀವುನಿಮ್ಮ ಶಿಷ್ಯ ಪರಂಪರವಾಗಿ ಸಿಂಹಾಸನಾರೂಢರಾಗಿ ಕಿರೀಟಭೃತರಾಗಿ ತಿರ್ಯಗಾಂದೋಳಿಕಾರೋಹಣರಾಗಿ ಶ್ವೇತಛತ್ರ, ಉಭಯಚಾಮರ. ಮಕರತೋರಣ. ವ್ಯಜನ ಹಗಲುಜ್ಯೋತಿ, ಪೀತಪಿಶಂಗ

ವರ್ಣ ಪತಾಕಾದಿ ಚಿನ್ಹೆಗಳಿಂದ ತಾಳ ಶಂಖ ಚಕ್ರಾದಿ ವಾದ್ಯಗಳಿಂದ ಯುಕ್ತ ವಾಗಿ ನಾಲ್ಕು ದೇಶಗಳನ್ನು ಸಂಚರಿಸಿ ಪ್ರಕಾಶಿತರಾಗಿ, ಪೂರ್ವ ಮರ್ಯಾದ ಶ್ರೇಷ್ಠರಾಗಿ ಹೈವದೇಶಸ್ಥಿತ ಹೈವದ್ರಾವಿಡ ಸಂಜ್ಞಿತ ಬ್ರಾಹ್ಮಣ್ಯ ಧರ್ಮಾಚಾರ ವಿಚಾರ ತತ್ಪರಸ್ಪರ ಪ್ರಾಯಶ್ಚಿತ್ತ ಅಗ್ರತೇಜ ಪೂಜೆ ಸ್ಥಾನಮಾನ್ಯ ಗೋಕರ್ಣ ಮಂಡಲಾಚಾರ್ಯತ್ವ ಮೊದಲಾದ್ದನ್ನು ಪ್ರಕಾಶಿಸಿಕೊಂಡು ಆಚಂದ್ರಾರ್ಕ ಸ್ಥಾಯಿಗಳಾಗಿ ಬಹರಿ ಯಂತ ಕೊಟ್ಟ ವೈಭವ ತಾಮ್ರ ಶಾಸನ. ಶ್ರೀ ಶ್ರೀ

---

ಶ್ರೀಗಣಾಧಿಪತಯೇನಮಃ|| ನಮಸ್ತುಂಗ ಸಿರಸ್ತುಂಗ ಚಂದ್ರಚಾಮರ ಚಾರವೆ| ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ || ಶ್ರೀಮನ್ಮ ಹಾರಾಜಾಧಿರಾಜ ರಾಜ ಪರಮೇಶ್ವರ ವೀರಪ್ರತಾಪ ಇಮ್ಮಡಿ ದೇವರಾಯ ಮಹಾರಾಯರು ವಿಜಯನಾನಾ ದೇಶದ ರಾಜಧಾನಿಯಲ್ಲಿ ದೃಷ್ಟಿಸಮಸ್ತ ದೇಶಗಳನ್ನು ಸದ್ಧರ್ಮದಲ್ಲು ಪ್ರತಿಪಾಲಿಸುತ್ತಂ, ಇದಂ ದಿನ ಶಾಲಿವಾಹನಶಕ ವರುಷ ೧೩೪೬ ನೇ ಸ್ವಭಾನು ಸಂ|| ರದ ಭಾದ್ರಪದ ಕೃಷ್ಣ ೨ ಗುರುವಾರ ರೇವತಿ ನಕ್ಷತ್ರ ಕನ್ಯಾ ಸಂಕ್ರಾಂತಿ ಸಂಯಮಕಾಲೇ ಹೇಮಾದ್ರಿತಟ ಶ್ರೀಮತ್ ತುಂಗಭದ್ರಾ ತೀರದಲ್ಲು ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ವರ್ಯ ಶ್ರೀಮದ್ಭಗವತ್ಪಾದ ಪೂಜ್ಯ ಶಿಷ್ಯ ಶ್ರೀಶಂಕರಾಚಾರ್ಯ ಶಿಷ್ಯ ಸುರೇ ಶ್ವರಾಚಾರ್ಯ ಶಿಷ್ಯ ವಿದ್ಯಾನಂದಾಚಾರ್ಯ ಪರಂಪರ ಪುರಸ್ಸರ ಭೋಗ ವರ್ಧನವಾಲ ಪುರುಷಾಧಿಷ್ಠಿತರಹ ಶತಶೃಂಗ ಪುರಾಧಿವಾಸ ಶ್ರೀ ಚಿದ್ಬೋಧ ಭಾರತೀ ಶ್ರೀಪಾದಂಗಳ ಗುರು ಕರಕಮಲ ಸಂಜಾತ ಶ್ರೀಮದ್ರಾಮಚಂದ್ರ ಪಾದಪದ್ಮ ಶ್ರೀಗೋಕರ್ಣ ರಘೋತ್ತಮ ಮಠದ ರಾಘವೇಶ್ವರ ಭಾರತೀ ಶ್ರೀ ಪಾದಂಗಳಿಗೆ, ಇಮ್ಮಡಿ ದೇವರಾಯ ಮಹಾರಾಯರು ಪೊಡಮಟ್ಟು ಕೊಟ್ಟ ವೈಭವ ತಾಮ್ರಶಾಸನ ಕ್ರಮವೆಂತೆಂದರೆ— ಪೂರ್ವದಲ್ಲು ವಿದ್ಯಾರಣ್ಯ ಶ್ರೀಪಾ ದಂಗಳು ಗೋಕರ್ಣದ ಶ್ರೀ ಮಹಾಬಲೇಶ್ವರ ದೇವರ ಸನ್ನಿಧಿಯಲ್ಲಿ ನಿಮ್ಮ ಪೂರ್ವಾಧಿಷ್ಠಿತರಹ ಚಿದ್ಬೋಧ ಭಾರತೀ ಶ್ರೀಪಾದಂಗಳಿಗೆ ಸಿಂಹಾಸನ ಕಿರೀಟ ತಿರ್ಯಗಾಂದೋಲಿಕ, ಶ್ವೇತಛತ್ರ, ಉಭಯ ಚಾಮರ, ಮಕರತೋರಣ, ವ್ಯಜನ, ಹಗಲು ಜ್ಯೋತಿ ಪೀತ ಪಿಶಂಗವರ್ಣ ಪತಾಕಾದಿ ಚಿನ್ಹೆ, ತಾಳ ಶಂಖಚಕ್ರಾದಿ ವಾದ್ಯ ಮೊದಲಾದ್ದನ್ನು ಕೊಟ್ಟು ಪ್ರಕಾಶಿಸಿ ಬಹದ್ದರಿಂದ ಈಗ ಶ್ರೀವಿರೂ ಪಾಕ್ಷ ದೇವರ ಸನ್ನಿಧಿಯಲ್ಲಿ ನಿಮಗೆ ಪಂಚದೀವಟಿಕಾದ್ವಯ ಆಂದೋ ಲಿಕೋಪರೀ ಪಂಚಕಲಶ ಮೊದಲಾದವನ್ನು ಅಧಿಕರಿಸಿ ಕೊಟ್ಟೆವಾಗಿ ನೀವು ನಿಮ್ಮ

ಶಿಷ್ಯ ಪಾರಂಪರ್ಯವಾಗಿ ಪಂಚದೀವಟಿಕಾದ್ವಯ ತಿರ್ಯಗಾಂದೋಲಿಕೋಪರಿ ಪಂಚಕಲಶ ಮೊದಲಾದ್ದರಿಂದ ಯುಕ್ತರಾಗಿ ನಾಲ್ಕು ದೇಶವನ್ನು ಸಂಚರಿಸಿ ಪ್ರಕಾಶಿಸಿ ಆಚಂದ್ರಾರ್ಕಸ್ಥಾಯಿಗಳಾಗಿ ಬಹಿರಿ ಎಂದು ಕೊಟ್ಟ ವೈಭವ ತಾಮ್ರ ಶಾಸನ. ಲೇಖಕ ಕೃಷ್ಣವೀರಂಣ್ಣಾಚಾರ್ಯ,

ಶ್ರೀವಿರೂಪಾಕ್ಷ ಎಂತ ರುಜು ಉಂಟು. ವರಹರೂಪಿನ ಮುದ್ರೆ ಇದೆ.

ದಾಖಲೆ ತಾರೀಕು ಲ ಅಗೋಸ್ತ ೧೮೩೬.

ನಂಬ್ರ ೧೩೬, ೧೮೩೩. ಇಂಗ್ಲಿಷ್ ಸಹಿ ಉಂಟು.

ಆ. ನ. ೪೭ ನೇ ಹುಕುಮು ಪ್ರಕಾರ ಇದರ ಸಹಿ ನಕಲು ನಂಬ್ರದಲ್ಲು ನಿಲೆ ಇಟ್ಟು ಇದನ್ನು ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರ ವಕೀಲ ಮಂಜನಾಥಯ್ಯಗೆ ಕೊಟ್ಟ ತಾ|| ೯ ನೇ ಫೆಬ್ರುವರಿ ೧೮೬೦ ನೇ ಇಸವಿ.

ಇಂಗ್ಲೀಷ್ ಸಹಿ ಉಂಟು.

---

## ಓದುಗರಲ್ಲಿ ಮುದ್ರಕರ ಎರಡು ಮಾತು.

ಶ್ರೀಮದ್ರಾಮಚಂದ್ರಪುರ ಮಠದ ಇತಿಹಾಸ ಪ್ರಕಾಶನ ಸಮಿತಿಯವರು ಈ " ಹವ್ಯಕ ಸಮಾಜ ಮತ್ತು ಶ್ರೀಗುರುಮಠದ ಇತಿಹಾಸ " ವೆಂಬ ಪುಸ್ತಕವನ್ನು ನಮ್ಮ ಕಡೆ ಮುದ್ರಿಸುವ ಕೆಲಸಕ್ಕಾಗಿ ಕೊಟ್ಟಿದ್ದರು. ನಾವಾದರೂ ಸಹ ಇದು ವರೆಗೂ ಸಂಣ ಪುಟ್ಟ ಮುದ್ರಣಕಾರ್ಯವನ್ನು ತೆಗೆದುಕೊಳ್ಳುತ್ತಿದ್ದೆವೇ ಹೊರತು ಪುಸ್ತಕ ಮುದ್ರಿಸುವ ಕೆಲಸವನ್ನು ತೆಗೆದುಕೊಂಡಿರಲಿಲ್ಲ. ಆದರೂ ಪುಸ್ತಕ ಮುದ್ರಿಸುವ ಕೆಲಸವನ್ನು ಮಾಡಬೇಕೆಂಬ ಅಭಿಲಾಷೆಯಿಂದ ಇದನ್ನು ಪ್ರಾರಂಭಿಸಿ, ಸಾಧ್ಯವಾದಮಟ್ಟಿಗೂ ಮುದ್ರಣ ದೋಷಗಳು ಬಾರದಂತೆ ಕೆಲಸ ಮಾಡಿರುತ್ತೇವೆ. ಆದರೂ ಸಹ ಇದರಲ್ಲಿ ಕೆಲವಾದರೂ ಮುದ್ರಣ ದೋಷಗಳಿರ ಬಹುದು. ಅಂತಹ ದೋಷಗಳಾಗಲೀ ಇತಿಹಾಸಕ್ಕೆ ಸಂಬಂಧಪಟ್ಟ ದೋಷ ಗಳಾಗಲೀ ಯಾವುದಾದರೂ, ಇದ್ದಲ್ಲಿ ಸಹೃದಯರಾದ ವಾಚಕರು ಅದನ್ನು ಇತಿಹಾಸ ಪ್ರಕಾಶನ ಸಮಿತಿಯವರಿಗಾಗಲೀ, ನಮಗಾಗಲೀ ತಿಳಿಸಿದಲ್ಲಿ ಮುಂದಿನ ಮುದ್ರಣದಲ್ಲಿ ಅದನ್ನು ಸರಿಪಡಿಸಿಕೊಳ್ಳುವೆವು.

**ಶ್ರೀ ರಂಗನಾಥ ಮುದ್ರಣಾಲಯ, ಸೊರಬ.**

# ಪರಮಾರ್ಥ ಪುಸ್ತಕಮಾಲೆಯ ಪುಸ್ತಕಗಳನ್ನು ಕುರಿತು, ಕೆಲವು ಅಭಿಪ್ರಾಯಗಳು.

## ೧. ಮೃತ್ಯು ವಿಜ್ಞಾನ:- ಲೇಖಕ, ವೈದ್ಯ ಗ. ಸು. ಪಾಟೀಲ ಬರಿಗೆ.

ಕ್ರಯ:- ರೂ. ೧-೮-೦.

ಶ್ರೀ|| ವಿದ್ಯಾಪ್ರವೀಣ, ವಿದ್ಯಾನಿಧಿ, ಶಿರೋಮಣಿ ವಿದ್ವಾನ್ ಸಿ. ರಾಮಚಂದ್ರಾಚಾರ್ಯ, ಮೀಮಾಂಸಾಪ್ರೊಫೆಸರ್, ಮಹಾರಾಜಾ ಸಂಸ್ಕೃತ ಕಾಲೇಜು, ಮೈಸೂರು. ಇವರ ಅಭಿಪ್ರಾಯ. ತಾ|| 25-9-53.

ಮೃತ್ಯು ಅಥವಾ ಮರಣ ಎಂಬ ಶಬ್ದ ಕೇಳಿದರೇ ಸಾಮಾನ್ಯವಾಗಿ ಎಲ್ಲರೂ ಹೆದರುತ್ತಾರೆ. ............... ಇಂತಹ ಮೃತ್ಯುವೆಂಬ ಒಂದೇ ವಿಷಯವನ್ನು ಅಧಿಕರಿಸಿ, ಪಾಮರರಿಗೂ, ಪಂಡಿತರಿಗೂ ರೋಚಕವಾದ ಶೈಲಿಯಲ್ಲಿ ವಿಷಯ ವಿಭಾಗದಿಂದ ಸ್ಪಷ್ಟವಾದ ಉದಾಹರಣೆಗಳಿಂದ ಸಹಿತ ಬರೆದಿರುವ ಗ್ರಂಥಗಳು ವಿರಳವಾಗಿವೆ. ಪ್ರಕೃತ ಪರಮಾರ್ಥ ಸಾಧನ ಸಂಘದವರು ಪ್ರಕಟಿಸಿರುವ ಮೃತ್ಯು ವಿಜ್ಞಾನವೆಂಬ ಗ್ರಂಥವು ಬಹುಮಟ್ಟಿಗೆ ಈ ಕೊರತೆಯನ್ನು ಪರಿಹರಿಸಲು ಶಕ್ತವಾಗಿದೆ. ................ ಅಮೂಲ್ಯವಾದ ವಿಷಯ ರತ್ನಗಳಿಂದ ಈ ಗ್ರಂಥವು ರತ್ನಾಕರವಾಗಿದೆ. ............... ಆಧುನಿಕ ಕಾಲದಲ್ಲಿ ಪುನರ್ಜನ್ಮ, ಪರಕಾಯ ಪ್ರವೇಶ, ಶ್ರಾದ್ಧ ಮುಂತಾದ ವಿಷಯಗಳಲ್ಲಿ ತುಂಬಾ ಅವಿಶ್ವಾಸವು ಹರಡಿದೆ. ಅದನ್ನು ಗ್ರಂಥಕಾರರು, ಯುಕ್ತಿಯಿಂದಲೂ ಅರ್ವಾಚೀನ ಗ್ರಂಥಗಳು, ಪತ್ರಿಕೆಗಳು ಮುಂತಾದವುಗಳ ಆಧಾರದಿಂದಲೂ ನಿರಾಕರಿಸಿ ಆಸ್ತಿಕ ಮತದ ಅಸ್ತಿಭಾರವನ್ನು ಸ್ಥಿರವಾಗಿ ಮಾಡಿರುತ್ತಾರೆ. ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿದವರು ಎಂತಹ ನಾಸ್ತಿಕರೇ ಆದರೂ, ಅಲೌಕಿಕ ವಿಷಯದಲ್ಲಿ ವಿಶ್ವಾಸವುಳ್ಳವರಾಗಿ ಇಹ-ಪರ ಜೀವನವನ್ನೂ ಮಂಗಲಮಯವಾಗಿ ಮಾಡಿಕೊಳ್ಳಬಹುದು ......... ಅಂತೂ ವಿಷಯ, ಭಾಷಾ, ಪ್ರತಿಪಾದನ ಶೈಲಿ, ಅಪೂರ್ವತೆಗಳ ದೃಷ್ಟಿಯಿಂದ ಗ್ರಂಥವು ನಿರ್ದೋಷವೂ, ಆಸ್ತಿಕರಿಂದಲೂ, ಜಿಜ್ಞಾಸುಗಳಿಂದಲೂ ಸಂಗ್ರಾಹ್ಯವೂ ಆಗಿದೆಯೆಂದು ಧಾರಾಳವಾಗಿ ಹೇಳಬಹುದು.



**೨. ಯೋಗಶಿಖೋಪನಿಷತ್. ೧ ಮತ್ತು ೨ ನೇ ಭಾಗಗಳು. ಲೇಖಕ, ವಿ. ಎಮ್. ಶರ್ಮ. ಎರಡೂ ಭಾಗಗಳ ಒಟ್ಟುಬೆಲೆ, ೧-೮-೦.**

ಸುಪ್ರಸಿದ್ಧ ಮಾಸಪತ್ರಿಕೆ ಬೆಂಗಳೂರಿನ " ಸುಬೋಧ " ದ ಅಭಿಪ್ರಾಯ.

" ...................... ಅವುಗಳಲ್ಲೊಂದಾದ ಈ ಯೋಗಶಿಖೋಪನಿಷತ್ತು ಅಭ್ಯಾಸ ವೈರಾಗ್ಯಗಳೆಂಬ ಕುಂದಣದ ಸಹಾಯಗೊಂಡು, ಸಿದ್ಧಗೊಳಿಸಿದ ನವರತ್ನಮಯ ಆಭರಣದಂತೆ ರಾರಾಜಿಸುತ್ತಿದೆ. ಗ್ರಂಥಕರ್ತರು ಇದನ್ನು ವ್ಯಾಖ್ಯಾನಮಾಡುವಲ್ಲಿ ಶೃತಿ ಸ್ಮೃತಿಗಳ ಆಧಾರವನ್ನೂ, ವಿಪುಲವಾದ ದೃಷ್ಟಾಂತಗಳನ್ನೂ ಒದಗಿಸಿ, ಇದರ ಉಪಯೋಗವು ಸಮಗ್ರವಾಗಿ ದೊರೆಯುವಂತೆ ಅನುಗೊಳಿಸಿದ್ದಾರೆ. .................................... "

---

**೩. ಕಥಾಕುಂಜ. ಲೇಖಕ, ವೈದ್ಯ ಗ. ಸು. ಪಾಟೀಲ, ಬರಿಗೆ. ಬೆಲೆ, ೦-೧೨-೦.**

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಪ್ರಮುಖ ಮಾಸ ಪತ್ರಿಕೆಯಾದ " ಪುಸ್ತಕ ಪ್ರಪಂಚ " ದ ಅಭಿಪ್ರಾಯ.

" ಕಲ್ಯಾಣ " ಹಿಂದೀ ಪತ್ರಿಕೆಯಲ್ಲಿ ಶ್ರೀ ಸುದರ್ಶನ ಸಿಂಹಜೀ ಅವರು, ' ಚಕ್ರ ' ಎಂಬ ಹೆಸರಿಟ್ಟುಕೊಂಡು, ಆಧ್ಯಾತ್ಮಿಕ ತತ್ವಗಳನ್ನು ಕುರಿತ ಅನೇಕ ಕತೆಗಳನ್ನು ಬರೆದರು. ಅವುಗಳ ಭಾವಾನುವಾದವೇ ಈ " ಕಥಾಕುಂಜ. " ಇದರಲ್ಲಿ ನಾಮದ ಆಶ್ರಯ, ಬ್ರಹ್ಮಚರ್ಯ, ಆರ್ತ, ತಲ್ಲೀನ, ತಪಸ್ಸು, ಎಂಬ ಐದು ಕತೆಗಳಿವೆ. ಈ ಕತೆಗಳು ತುಂಬ ಸ್ವಾರಸ್ಯವಾಗಿವೆ. ಇಂಥ ಉತ್ತಮ ಕಥಾ ಸಂಕಲನವನ್ನು ಕನ್ನಡಿಸಿದ ಶ್ರೀ ಪಾಟೀಲರು ಧನ್ಯರು.

---

**೪. ಭಗವಾನ್ ಶ್ರೀಕೃಷ್ಣ. ಲೇಖಕ, ವೈದ್ಯ ಗ. ಸು. ಪಾಟೀಲ, ಬರಿಗೆ. ಬೆಲೆ, ೧-೪-೦.**

" ಪುಸ್ತಕ ಪ್ರಪಂಚ " ದ ಅಭಿಪ್ರಾಯ.

ವ್ಯಾಸ ಮಹಾಮುನಿಗಳು ಸಂಸ್ಕೃತದಲ್ಲಿ ಬರೆದಿರುವ ಭಾಗವತದ ಕನ್ನಡ ಸಾರಾಂಶವೇ ಈಭಗವಾನ್ ಶ್ರೀಕೃಷ್ಣ. ಕೊನೆಯಲ್ಲಿ ಶ್ರೀಮತಿ ಪಾರ್ವತಮ್ಮ ನಾರಾಯಣ ಭಟ್ಟ ಅವರು ರಚಿಸಿದ " ಕೃಷ್ಣ ಚರಿತೆ " ಎಂಬ ಹಾಡನ್ನೂ ಹೆಣ್ಣು ಮಕ್ಕಳ ಉಪಯೋಗಕ್ಕಾಗಿ ಕೊಟ್ಟಿದೆ .................................... . ಪುಸ್ತಕದ ಅಚ್ಚು ಕಟ್ಟು ಸುಮಾರಾಗಿದೆ.

**೫. ಸ್ತ್ರೀ ಸಮಾಜ. ಲೇಖಕ, ವೈದ್ಯ ಗ. ಸು. ಪಾಟೀಲ್ ಬರಿಗೆ. ಬೆಲೆ, ೧-೪-೦.**

" ಸಾಧನ " ಮಾಸಪತ್ರಿಕೆಯ ಅಭಿಪ್ರಾಯ.

" ಪ್ರಕೃತ ಗ್ರಂಥದಲ್ಲಿ ಶ್ರೀ|| ಪಾಟೀಲರು, ನಮ್ಮ ಭಾರತೀಯ ಸ್ತ್ರೀ ಸಮಾಜದ ಅಭಿವೃದ್ಧಿಗೆ ಆವಶ್ಯಕವೆಂದು ತೋರುವ ಎಲ್ಲ ಬಗೆಯ ಸಮಸ್ಯೆಗಳನ್ನು ಬಹು ವಿಚಾರ ಪೂರ್ವಕವಾಗಿ ವಿಮರ್ಶಿಸಿದ್ದಾರೆ. " ಎಂದಿದ್ದಾರೆ, ಇದಕ್ಕೆ ಮುನ್ನುಡಿಯನ್ನು ಬರೆದ " ಸುಬೋಧ " ಪತ್ರಿಕೆಯ ಸಂಪಾದಕರಾಗಿ ಸುಬೋಧ ರಾಮರಾಯರೆಂದು ಕೀರ್ತಿವೆತ್ತ ರಾಮರಾಯರು.

ವಿಚಾರ ಪ್ರಚೋದಕಗಳಾಗಿ ಯೋಗ್ಯ ಮಾರ್ಗದರ್ಶನ ಮಾಡಿಸುವಂಥ ಅಂಕೆ ಸಂಖ್ಯೆಗಳಿಂದ ಸಿದ್ಧಪಡಿಸಿ ತೋರಿಸಿದ ಹಲವು ಸ್ತ್ರೀ ಸಮಸ್ಯೆಗಳನ್ನು ಇದರಲ್ಲಿ ಓದಬಹುದಾಗಿದೆ. " ಇದಮಿತ್ಥಂ " ಎಂದು ಬೆರಳೆತ್ತಿ ತೋರಿಸುವ ಸಂದರ್ಭಗಳಲ್ಲಿ ಸಮಾಜಸುಧಾರಕರೆಂದು ಬೊಬ್ಬಾಟವೆಬ್ಬಿಸಿರುವ ಜನರ ಬಾಯಿಬಡಿದು ಸುಮ್ಮನಾಗಿಸುವಷ್ಟು ಸುಸ್ಪಷ್ಟವಾಗಿದೆ, ಇದರ ವಿಚಾರ ಸರಣಿ ........................ ನಮ್ಮ ಸಮಾಜ ಸುಧಾರಣೆಯಕಾರ್ಯಕ್ಕೆ ಕೈಹಾಕಿದವರು ಈ ಪುಸ್ತಕವನ್ನೊಮ್ಮೆ ಅವಶ್ಯ ಓದಲೇಬೇಕು. ಅವರ ಮಾತಿಗೆ ಮನಸೋಲುವ ನಮ್ಮ ಸಮಾಜದ ಸ್ತ್ರೀ ಪುರುಷರು ಈ ಗ್ರಂಥದಲ್ಲಿ ಹೇಳಿರುವ ವಿಚಾರಗಳನ್ನು ಮನನಮಾಡಿಕೊಂಡಿರಬೇಕೆಂದು ಸೂಚಿಸುವೆವು ............

---

**೬. ಮುಕ್ತಿಸೋಪಾನತ್ರಯ. ಲೇಖಕ, ವಿ. ಎನ್. ಶರ್ಮ, ಬರಿಗೆ.**

" ಪುಸ್ತಕ ಪ್ರಪಂಚ " ದ ಅಭಿಪ್ರಾಯ.

ಈ ಕೃತಿಯಲ್ಲಿ ಮನುಷ್ಯತ್ವ, ಮುಮುಕ್ಷುತ್ವ ಮತ್ತು ಮಹಾಪುರುಷ ಸಂಶ್ರಯ ಎಂಬ ಮೂರು ಸೋಪಾನಗಳಲ್ಲಿ ಮುಕ್ತಿ ಸಾಧನೆಯನ್ನು ವರ್ಣಿಸಿದೆ. ಶ್ರೀ|| ವೈದ್ಯ ಗ. ಸು. ಪಾಟೀಲರು ರಚಿಸಿರುವ " ಪಶ್ಚಾತ್ತಾಪ " ಎಂಬ ಪದ್ಯವನ್ನೂ ಕೊನೆಯಲ್ಲಿ ಕೊಟ್ಟಿದೆ. ........................ ಆದರೂ ವಿಷಯ ಪ್ರತಿಪಾದನಾ ಶೈಲಿ ಚೆನ್ನಾಗಿದೆ, ಪುಸ್ತಕದ ಅಚ್ಚುಕಟ್ಟು ಅಂದವಾಗಿದೆ.

ಇಂಥ ವಿಷಯಗಳ ಮೇಲೆ ಪುಸ್ತಕಗಳನ್ನು ಪ್ರಕಟಿಸುವುದು ದೊಡ್ಡ ಕೆಲಸ. ಈ ಕೆಲಸಕ್ಕೆ ಕೈಹಾಕುವ ಪ್ರಕಾಶಕರೂ, ದುರ್ಲಭ. ಆದರೂ ಉಳವಿಯ ಪರಮಾರ್ಥ ಸಂಘದವರು ಇದಕ್ಕಾಗಿಯೇ ನಿಃಸ್ವಾರ್ಥವಾಗಿ ದುಡಿಯುತ್ತಿರುವುದು ಪ್ರಶಂಸನೀಯವಾಗಿದೆ. ಗೀತೆ, ಮುಕ್ತಿ, ಯೋಗಾಭ್ಯಾಸ ಮುಂತಾದ ವಿಷಯಗಳ ಮೇಲೆ ಪುಸ್ತಕಗಳನ್ನು ಪ್ರಕಟಿಸಿ, ದೇಶಸೇವೆಮಾಡುತ್ತಿರುವ ಆಪ್ರಕಟಣ ಸಂಸ್ಥೆ

ಶ್ರೀ ಕೃಷ್ಣನ ಕೃಪೆಯಿಂದ ಇನ್ನೂ ಅಭಿವೃದ್ಧಿಯಾಗಲಿ, ಇಂಥ ನೂರಾರು ಗ್ರಂಥಗಳನ್ನು ಪ್ರಕಟಿಸಲಿ, ಅವುಗಳಿಂದ ಕನ್ನಡಿಗರಿಗೆ ಹೆಚ್ಚು ಉಪಕಾರವಾಗಲಿ.

---

**೭. ಗೀತಾನುಷ್ಠಾನ ಪದ್ಧತಿ. ಲೇಖಕ ವೈದ್ಯ ಗ. ಸು. ಪಾಟೀಲ, ಬರಿಗೆ. ಬೆಲೆ, ೦-೧೨-೦.**

" ಪುಸ್ತಕ ಪ್ರಪಂಚ " ದ ಅಭಿಪ್ರಾಯ.

ಮಾನ್ಯ ಲೇಖಕರು ೧೯೪೦ ರಲ್ಲೊಮ್ಮೆ ಮತ್ತು ೧೯೪೭ ರಲ್ಲೊಮ್ಮೆ ಒಂದೊಂದು ರೀತಿ ಅನುಸರಿಸಿದ ಗೀತಾನುಷ್ಠಾನ ಕ್ರಮವನ್ನು ಈ ಪುಸ್ತಕದಲ್ಲಿ ವಿವರಿಸಿದ್ದಾರೆ. ............................ ಗೀತೆಯನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಎಂಬುದನ್ನು ತಿಳಿಸುವ ಇದೊಂದು ಉತ್ತಮವಾದ ಪುಸ್ತಕ.

---

**೮. ಯೋಗ ಸಂದೇಶ. ಲೇಖಕ, ವಿದ್ವಾನ್ ಕೆ. ಎಸ್. ಭಾಸ್ಕರಭಟ್ಟ, ಭೀಮನಕೋಣೆ. ಕ್ರಯ, ೧-೮-೦.**

ಇದೊಂದು ಯೋಗಶಾಸ್ತ್ರದ ವಿವೇಚನಾತ್ಮಕವಾದ ಗ್ರಂಥ. ಹಲವು ಪ್ರಾಚೀನ ಅರ್ವಾಚೀನ ಗ್ರಂಥಗಳ ಆಧಾರದಮೇಲೆ ಈ ಪ್ರಬಂಧ ಬರೆಯಲ್ಪಟ್ಟದ್ದು ಸಂಗ್ರಾಹ್ಯವಾಗಿದೆ.

ಮೈಸೂರು ಸಂಸ್ಥಾನದ ಲೋಕಲ್ ಸೆಲ್ಫ್ ಗೌರ್ನಮೆಂಟ್ ಕಮಿಷನರವರಿಂದ ಆರ್ಡರು ನಂ. R. D. R. 7/921, 53-54 ತಾ|| 31-8-1953 ಪ್ರಕಾರ ಸಂಸ್ಥಾನದ ಎಲ್ಲಾ ಗ್ರಾಮ ಪಂಚಾಯ್ತಿಗಳಿಗೂ ಮೇಲ್ಕಂಡ ಎಲ್ಲಾಪುಸ್ತಕಗಳನ್ನು ಕೊಂಡುಕೊಳ್ಳಲು ಮಂಜೂರಾಗಿದೆ.

**ಪುಸ್ತಕ ದೊರೆಯುವ ವಿಳಾಸ :—**

**ಅಧ್ಯಕ್ಷ - ಪರಮಾರ್ಥ ಸಾಧನ ಸಂಘ, ಪೋಸ್ಟ ಉಳವಿ.**
ULAVI. ( Sorab-Shimoga. )





ಸೊರಬದ ಶ್ರೀ ರಂಗನಾಥ ಮುದ್ರಣಾಲಯದಲ್ಲಿ
ಮುದ್ರಿಸಲ್ಪಟ್ಟಿತು.

---

**ಪುಸ್ತಕ ದೊರೆಯುವ ಸ್ಥಳ :-**

1 ಶ್ರೀಮದ್ರಾಮಚಂದ್ರಾಪುರಮಠ, ತೀರ್ಥಹಳ್ಳಿ.
ಪೋಸ್ಟ್ ತೀರ್ಥಹಳ್ಳಿ. (ಡಿ|| ಶಿವಮೊಗ್ಗ.)

2 ಹೊಸಬಾಳೆ ಸುಬ್ಬರಾವ್ ಎಂಡ್ ಬ್ರದರ್,
ಕ್ಲಾತ್ ಎಂಡ್ ಜನರಲ್ ಮರ್ಚಂಟ್, ಸೊರಬ.
ಪೋಸ್ಟ್ ಸೊರಬ. (ಡಿ|| ಶಿವಮೊಗ್ಗ.)